# ನೀರಸ ಜೀವನ

## ಮತ್ತು ಇತರ ಕಥೆಗಳು

ಅನುವಾದಕರು :

ಶ್ರೀ. ವೆ. ವಾ. ಸಸನೂರ

ಬೆಲೆ

೧—೮—೦

ಮನೋಹರ ಗ್ರಂಥ ಭಾಂಡಾರ

ಧಾರವಾಡ

ಮುದ್ರಕರು :

ಎನ್. ಎಸ್. ಬೆಂಗೇರಿ
ವಿಜಯ ಮುದ್ರಾಲಯ, ಧಾರವಾಡ

ಪ್ರತಿಗಳಿಗಾಗಿ

**ಮನೋಹರ ಗ್ರಂಥ ಭಾಂಡಾರ, ಧಾರವಾಡ**
**ಕನ್ನಡ ಪುಸ್ತಕಾಲಯ, ಬೆಳಗಾವಿ**
ಇವರಿಗೆ ಬರೆಯಿರಿ

ಪ್ರಕಾಶಕರು

ದ. ಬಾ. ಕುಲಕರ್ಣಿ
ಮನೋಹರ ಗ್ರಂಥ ಭಾಂಡಾರ
ಧಾರವಾಡ

# ಮೊದಲ ಮಾತು



ರಷ್ಯದ ವಿಖ್ಯಾತ ಸಾಹಿತಿಗಳಾದ ಆ್ಯಂಟನ್ ಚೆಕಾಫ್ಹರ ಕಥೆಗಳಿವು. ನನ್ನ ಸ್ನೇಹಿತರಾದ ಶ್ರೀ ಚುಳ್ಕಿಯವರು ಈ ಮೊದಲೇ ಚೆಕಾಫ್ಹರ ಕಥೆಗಳ ಒಂದು ಸಂಗ್ರಹವನ್ನು ಕನ್ನಡದಲ್ಲಿ ಪ್ರಕಟಿಸಿದ್ದಾರೆ. ಈಗ ನಾನು ನೀಡುತ್ತಿರುವದು ಎರಡನೇ ಸಂಕಲನ. ಬರವಣಿಗೆಯಲ್ಲಿ ಇದು ನನ್ನ ಮೊದಲ ಯತ್ನ.

ಚೆಕಾಫ್ಹರು ಬರವಣಿಗೆಯನ್ನು ಒಂದು ಉದ್ಯಮವನ್ನಾಗಿ ಕೈಕೊಂಡರು. ಈ ಮಾತನ್ನು ಅವರೆ ಒಂದು ಸಲ ಹೇಳಿದ್ದಾರೆ. ಈ ಒಂದು ನಿಶ್ಚಿತ ಮಾತಿನ ಹಿಂದೆ, ಬಹಳ ಅರ್ಥ ಪರಂಪರೆ ಅಡಗಿದೆ. ಅವರ ಇಡೀ ಜೀವನದ ಹಿನ್ನೆಲೆಯೇ ಈ ಮಾತು! ದಿನ-ದಿನಕ್ಕೂ ಗಾತ್ರದಲ್ಲಿ ಬೆಳೆಯುತ್ತ ಆತ್ಮದ ಮುನ್ನೋಟದಲ್ಲಿ ಹೊಳೆಯುತ್ತ, ವಿಧವಿಧ ಅನುಭವದ ಗಟ್ಟಿ ಮುಟ್ಟಾದ ತಳಪಾಯದ ಮೇಲೆ ನಿಂತಿತು—ಇವರ ಸಾಹಿತ್ಯದ ಪ್ರಚಂಡ ಪ್ರಾಸಾದ.

ಚೆಕಾಫ್ಹರು ವಿವಿಧ ರೀತಿಯ ಸಾಹಿತ್ಯವನ್ನು ನಿರ್ಮಿಸಿದ್ದಾರೆ. ಸಣ್ಣ ಕತೆ, ನೀಳ್ಗತೆ, ಲಘು ಕಾದಂಬರಿ, ಪ್ರದೀರ್ಘ ಕಾದಂಬರಿ, ನಾಟಕ ಮುಂತಾದವನ್ನು ಬರೆದಿದ್ದಾರೆ. ಈ ಎಲ್ಲ ಸಾಹಿತ್ಯದ ಅಂಗದಲ್ಲೂ ಅವರ ಕುಸುರಿನ ತಂತ್ರ, ವಿವಿಧತೆಯ ವೈಚಿತ್ರ್ಯ ಎದ್ದು ಕಾಣುತ್ತದೆ. ಒಂದು ಅದ್ಭುತ ಸ್ವಪ್ನ ಪ್ರಪಂಚವನ್ನು ನಿರ್ಮಿಸಿ ವಾಚಕರನ್ನು ಓದುವಾಗಷ್ಟೆ ಅಲ್ಲ—ಓದಿದ ಮೇಲೂ ಎಷ್ಟೋ ದಿನ ಆ ಕನಸಿನ ಕಾವಿನಲ್ಲಿಯೇ ಮೆಚ್ಚುಮದ್ದು ಬಡಿದವರಂತೆ ಉನ್ಮಾದಾವಸ್ಥೆಯಲ್ಲಿ ಓಲಾಡಿಸುತ್ತದೆ—ಇವರ ಸಾಹಿತ್ಯದ ಕೈಚಳಕ. ಕನ್ನಡದಲ್ಲಿ ಅವರ ಪ್ರದೀರ್ಘ ಕಾದಂಬರಿಗಳು ಬಂದಿಲ್ಲ. ಒಂದನ್ನು ತರಬೇಕೆಂದು ನಾನು ಎಣಿಕೆ ಹಾಕಿದ್ದೇನೆ. ಹೊಸ ವಿಚಾರ

ಪ್ರಣಾಲಿ, ಬದಲಾದ ರಾಜಕೀಯ ಜೀವನದಲ್ಲಿ ಕಾಲಿಡುವ ನಮಗೆ, ಕ್ರಾಂತಿ ಪೂರ್ವದ ರಷ್ಯದ ಸಾಹಿತ್ಯ ಒಂದು ದಿವ್ಯ ಮಾರ್ಗದರ್ಶಿಯಾದೀತೆಂದು ನನ್ನ ಅಭಿಪ್ರಾಯ

ಈ ಕತೆಗಳನ್ನು ನಾನು ಅನುವಾದ ಮಾಡಿಟ್ಟು ೨-೩ ವರುಷಗಳಾದವು. ಈಗ ಇದನ್ನು ಅಚ್ಚು ಹಾಕಲು ಹುರಿದುಂಬಿಸಿದವರು ಶ್ರೀ. ಚುಳ್ಕಿ ಗೋವಿಂದರಾಯರು. ಅಚ್ಚಿನ ಕಾರ್ಯ ಬೇಗನೇ ಮುಗಿಸಿಕೊಟ್ಟವರು ಆತ್ಮೀಯರಾದ ಶ್ರೀ. ಹೊಸ್ಕೇರಿಯವರು. ಇವರಿಬ್ಬರಿಗೂ ನಾನು ಧನ್ಯವಾದಗಳನ್ನರ್ಪಿಸುತ್ತೇನೆ.

**—ವೇ. ವಾ. ಸವನೂರ**

## ಪರಿವಿಡಿ

# ಈಸ್ಟರ್ ದಿನ

ಆಗ ಈಸ್ಟರು. ಬೆಳಗು ಪ್ರಶಾಂತವಾಗಿತ್ತು. ಬಾನಲ್ಲಿ ಒಂದೂ ಮೋಡ ವಿಲ್ಲ ಇನ್ನೇನು ಸೂರ್ಯ ಹುಟ್ಟಬೇಕು. ಮೂಡಣದಲ್ಲಿ ಮಂಜು ಜಾರಿ ಕೆಂಪು ಬಣ್ಣದ ಏರಿಳಿತ ನಡೆದಿತ್ತು. ಆಗೊಂದು ಈಗೊಂದು ಚಿನ್ನದ ಗೆರೆಯು ಚಿನ್ನಾಟ ಸಾಗಿತ್ತು. ರಾತ್ರಿ ಚರ್ಚಿಗೆ ಹೋದ ಟಾರಖಾವನು ಈಗ ಹಿಂದಿರು ಗಿದ್ದ. ಜೊತೆಗೆ ಹೆಂಡತಿಯೂ ಇದ್ದಳು.

ಟಾರಖಾವನ ದಾರಿ ಸಾಗಿತ್ತು. ತಲೆಯಲ್ಲಿಯ ವಿಚಾರಗಳೂ, ಅವನು ಕುಳಿತ ಗಾಡಿಯ ಗಾಲಿಯಂತೆ ದುಂಡುದುಂಡಾಗಿಯೇ ಇದ್ದುವು. ಒಂದು ಸುತ್ತಾದ ಮೇಲೆ ಮತ್ತೊಂದು! ಅವನ ಮದುವೆಯಾದ ಮೊದಲಲ್ಲಿ ಬಂದ ಈಸ್ಟರು ಇದು. ಅವನಿಗೆ ಯಾವುದರ ಕೊರತೆಯೂ ಇಲ್ಲ. ಎಲ್ಲ ಈಡು. ದೊಡ್ಡ ಮನೆ. ಹೊಲಗಳೋ ಬೇಕಾದಷ್ಟು. ಕಾಳಿನಿಂದ ತುಂಬಿದ ಹಗೆಗಳು. ಮನೆಯ ತುಂಬೆಲ್ಲ ಬೆಳಕು ಚೆಲ್ಲುತ್ತಿರುವ ಚೆಲುವೆ ಹೆಂಡತಿ. ಈಗ ದಾರಿಯ ಹತ್ತಿರವೇ ಸುತ್ತುಮುತ್ತು ಕಿರು ಹುಲ್ಲು. ಸ್ವಲ್ಪ ಆಚೆ ಅದೋ ಅಲ್ಲಿ ರವಿ ಉದಯ. ಎಲ್ಲವೂ ಎಷ್ಟು ಚೆನ್ನ! ಮನಸ್ಸು ತಾನೇತಾನಾಗಿ ಪ್ರಶಾಂತವಾಗಿತ್ತು.

ದಾರಿಯ ಪಕ್ಕಕ್ಕೇ ಇರುವ ಹೊಟೆಲಿಗೆ ಹೋಗಿ ಅವರೀರ್ವರೂ ಫಲಹಾರ ತೀರಿಸಿದರು. ಹೊರಗೆ ಬಂದಾಗ ಟಾರಖಾವನ ಬಾಯಲ್ಲಿ ಸಿಗರೇಟು. ಸುಳಿ-ಸುಳಿಯಾಗಿ ಏಳುತ್ತಿರುವ ಹೊಗೆಯನ್ನು ನೋಡುತ್ತ ನಿಂತಾಗ ಅವನ ಅಂಗಾಂಗವೆ ತೃಪ್ತಿಯಿಂದ ತುಂಬಿತ್ತು.

"ಇಂದು ಶುಭದಿನವೆನ್ನುವದು ಇದಕ್ಕಾಗಿಯೇ–! ಸುಮ್ಮನೇ ಅಲ್ಲಾ–! ಲೀಜಾ, ಸ್ವಲ್ಪ ತಾಳು. ಅದೋ ನೋಡು, ಈಗ ಸೂರ್ಯ ಹೇಗೆ ಕುಣಿ

ಯುತ್ತ ಬರುತ್ತಾನೆ. ಪ್ರತಿ ಈಸ್ಟರ ದಿನವೂ ಅವನು ಹೀಗೇ ಬರುವದು. ಅವನೂ ಈ ದಿವಸ ಸುಖಿ. ''

" ಸಾಕು ಸಾಕು– ಅವನಿಗೆಲ್ಲಿ ಜೀವ " ಲೀಜಾ ಕೊಂಕು ನುಡಿದಳು.

" ಅವನ ಮೇಲೂ ಜನ ವಾಸವಾಗಿದ್ದಾರೆ " ಟಾರಖಾವ ಮುಂದು ವರಿಸಿದ. " ಮೊನ್ನೆ ಆಯಿವ್ಹಾನ ಹೇಳಲಿಲ್ಲವೆ? ಎಲ್ಲ ಗ್ರಹಗಳ ಮೇಲೂ ಜನವಾಸವಿದೆ ಎಂದು. " ಅದೇ ನಿಜ. ಕಲಿತವರೆಂಬುವರೇ ಇಲ್ಲದ ಬುದ್ಧಿ ಗೇಡಿತನದಿಂದ ಮಾತಾಡುವರು. ಇವರಿಗೆ ಬೇಕು; ಯಾವಾಗಲೂ ನ್ಯಾಯ ತಾಳು ಅದೊ–ಅದು ಕುದುರೆಯಲ್ಲವೆ?— ಹೌದು-ಹೌದು.

ಮನೆ ಇನ್ನೂ ಅರ್ಧ ದಾರಿಯಿರಬಹುದು. ಕೊಳ್ಳದಲ್ಲಿಯ ದಾರಿಯ ಅಂಚಿನಲ್ಲಿ ಒಂದು ಥಡಿ ಹಾಕಿದ ಕುದುರೆ ಹೋದ ವರುಷ ಬೆಳೆದ ಒಣ ಹುಲ್ಲು ಮೂಸಿಸುತ್ತ ನಿಂತಿತ್ತು. ಹತ್ತಿರವೆ ಒಂದು ಒಣ ಹುಲ್ಲಿನ ಹೊರೆ. ಅದಕ್ಕೆ ಆತುಕೊಂಡು ಒಬ್ಬನು ಕುಳಿತಿದ್ದ. ದೇಹವು ವಿಪರೀತ ಬಾಗಿತ್ತು. ಕೂದಲೂ ಕೆಂಪಾಗಿದ್ದವು. ದೃಷ್ಟಿಯು ಕಾಲುಗಳ ಕಡೆಗೆ ನೆಟ್ಟಿತ್ತು. ಅವನೊಬ್ಬ ಕೊಸೇಕ.

" ಕ್ರೈಸ್ತನು ಉದಯನಾಗಿದ್ದಾನೆ. " ಅವನನ್ನು ಕುರಿತು ಟಾರಖಾವನು ನುಡಿದನು.

'' ಆಗದೆ ಇದ್ದಾನೇ– ? ಆಗಿರಲೇ ಬೇಕು! " ಕೊಸೇಕ ಮೇಲೆ ನೋಡದೆ ಮಾರುತ್ತರ ಕೊಟ್ಟ.

" ನೀನು ಹೊರಟದ್ದು ಎಲ್ಲಿಗೆ? "

" ಮನೆಗೆ. ಈಗ ರಜ! "

" ಹಾಗಿದ್ದರೆ ನೀನು ಇಲ್ಲೇ ಏಕೆ ಕುಳಿತೆ ? "

'' ಅದೇ–ಮೈಯಲ್ಲಿ ಸ್ವಸ್ಥವಿಲ್ಲಾ. ಮುಂದೆ ದಾರಿ ನಡಿಯೋಣ ವೆಂದರೆ–ಶಕ್ತಿಯಿಲ್ಲಾ! "

" ನಿನಗೆ ಏನು ಜಡ್ಡು "

" ಎಲ್ಲವೂ. ''

'' ಹಾಗಿದ್ದರೆ ನೀನು ಎಂಥ ದುರ್ದೈವಿ! ಜನ ಹಬ್ಬದಲ್ಲಿ ತೊಡಗಿದಾಗ ನಿನಗೆ ಜಡ್ಡು. ಆ ಹಳ್ಳಿಗೆ ಹೋಗು ಅಥವಾ ಯಾವುದಾದರೂ ಧರ್ಮ

ಶಾಲೆಯಲ್ಲಿ ವಿಶ್ರಮಿಸು. ಹಾಗಲ್ಲದೆ ಹೀಗೆ ದಾರಿಯಲ್ಲಿ ಕುಳಿತರೆ ಏನು ಬಂತು ?" ಎಂದ ಟಾರಖಾವ. ಕೊಸೇಕ ತಲೆಯೆತ್ತಿ ಮೇಲೆ ನೋಡಿದ. ಕಣ್ಣಲ್ಲಿ ಸೋತ ದುಃಖ ತೇಲುತ್ತಿತ್ತು.

"ನೀವು ಈಗ ಚರ್ಚಿನಿಂದ ತಿರುಗಿ ಬರುತ್ತೀರಲ್ಲವೆ ?"

"ಹೌದು, ನಾವು ಈಗ ಚರ್ಚಿನಿಂದ ತಿರುಗಿ ಬರುತ್ತಿದ್ದೇವೆ."

"ನಾನು ಈ ದಾರಿಯಲ್ಲಿಯೇ ಹೀಗೆ ಕೊಳೆಬೀಳಬೇಕಾಯಿತು. ಇದು ಎಂಥ ಶುಭ ದಿನ ! ನಾನು ಮನೆ ಮುಟ್ಟುವದು ಭಗವಂತನ ಮನಸ್ಸಿಗೆ ಬಂದಿಲ್ಲಾ. ಕುದುರೆ ಹತ್ತಲು ಶಕ್ತಿಯಿಲ್ಲಾ. ನೀವೂ ಧಾರ್ಮಿಕ ಕ್ರಿಶ್ಚಿಯನ್ನರಾಗಿ ಕಾಣುತ್ತೀರಿ. ನನಗೂ ಇಂದು ಉಪವಾಸ. ಏನೊ ಚೂರು ಪ್ರಸಾದದ ತುಣುಕನ್ನು ಕೊಟ್ಟರೆ ನನ್ನದೂ ಪಾರಣೆಯಾದೀತು."

"ಏನು ಪ್ರಸಾದವೇ ? ಸ್ವಲ್ಪ ತಾಳು, ಕೊಡುತ್ತೇನೆ."

ಟಾರಖಾವನು ಜೇಬಿನಲ್ಲಿ ಏನೋ ಹುಡುಕಿದ. ಸಿಕ್ಕಲಿಲ್ಲ. ಹೆಂಡತಿಯ ಕಡೆಗೆ ತಿರುಗಿ ನೋಡಿದ.

"ಚಾಕೂ ಇಲ್ಲ. ಅದಿಲ್ಲದೆ ಇದನ್ನು ಕೊಯ್ಯ ಬರುವದಿಲ್ಲಾ. ನಿನ್ನ ಹತ್ತಿರ ಇದ್ದರೆ ನೋಡು." ಅದಕ್ಕೂ ಹೆಂಡತಿಯು ಸುಮ್ಮನಿದ್ದಳು.

ಎಡವುತ್ತ ತಡವುತ್ತ ಕೊಸೇಕು ಎದ್ದ. ಥಡಿಯಲ್ಲಿ ಹುಡುಕಿ ಒಂದು ಚಾಕು ಹೊರಗೆ ತೆಗೆದ.

"ಇದೇನು ಹುಚ್ಚುಚ್ಚಾರ" ಎಂದು ಟಾರಖಾವುನ ಹೆಂಡತಿ ಮಾತನ್ನು ಮುಂದುವರಿಸಿದಳು.

"ಹೀಗೆಲ್ಲಿಯಾದರೂ ಉಂಟೆ ? ದೇವರ ಪ್ರಸಾದ ಇದು. ಮನೆಗೆ ಒಯ್ಯದೆ ಹೀಗೆ ದಾರಿಯಲ್ಲಿ ಮೀಸಲು ಮುರಿಯುವದೇ ? ದಾರಿಯಲ್ಲಿ! ಅದೋ ಆ ಹಳ್ಳಿಗೆ ಹೋಗು. ಅಲ್ಲಿ ನಿನ್ನ ಪಾರಣೆಗೆ ಅನುಕೂಲವಾದೀತು" ಎನ್ನುತ್ತ ಗಂಡನ ಕೈಯಲ್ಲಿದ್ದ ಗಂಟನ್ನು ಕಸಿದಳು. ದೇವರ ಪ್ರಸಾದ ಇದು. ಇದನ್ನು ಹೀಗೆ ದಾರಿಯಲ್ಲಿ ಬಿಚ್ಚುವದೇ ? ಅದಕ್ಕೇನು ನಿಯಮವಿಲ್ಲವೇ ಹ್ಯಾಗೆ ?"

"ನಿನಗೆ ಕೊಟ್ಟೇನೆಂದರೆ ಇವಳು ಬೇಡವೆನ್ನುತ್ತಿದ್ದಾಳೆ. ಉಪಾಯವಿಲ್ಲ. ನಿನ್ನ ದಾರಿಯು ಸುಖಮಯವಾಗಲಿ" ಟಾರಖಾವನೆಂದನು.

ಟಾರಖಾವ ಲಗಾಮು ಕೈಯಲ್ಲಿ ತಕ್ಕೊಂಡ. ಮತ್ತೆ ಗಾಡಿಯು ಕಿರಿಕಿರಿ ಸದ್ದು. ಒಳಗೆ ಹೆಂಡತಿಯ ಗೊಣಗಾಟ. ಪ್ರಸಾದ ಮನೆಗೆ ಒಯ್ಯದೆ ಮೀಸಲು ಮುರಿಯ ಕೂಡದು; ಹಾಗೆ ಹೀಗೆ ಎಂದು. ಮೋಡಗಳನ್ನು ಭೇದಿಸಿ ಕೊಂಡು ಪೂರ್ವದಿಕ್ಕಿನಲ್ಲಿ ಸೂರ್ಯನ ಕಿರಣಗಳು ಒಂದೊಂದೇ ಬೀಳ ಹತ್ತಿದವು. ಪಕ್ಷಿಗಳು ಚಿಲಿಪಿಲಿಗುಟ್ಟುತಿದ್ದವು.

ಒಂದೆರಡು ಫರ್ಲಾಂಗು ಸಾಗಿದ್ದೀತು ದಾರಿ. ಕೊಳ್ಳವನ್ನು ದಾಟಿ ಗಾಡಿಯು ದಿಬ್ಬಕ್ಕೆ ಬಂದಿತ್ತು. ಟಾರಖಾವನು ಹಿಂತಿರುಗಿ ನೋಡಿದ. "ಛೇ, ಕಾಣಿಸುವದಿಲ್ಲ. ಎಲ್ಲಿ ಹೋದನೋ ಏನೋ? ದಾರಿಯಲ್ಲಿ ಹೀಗೆ ಜಡ್ಡಾಗಿ ಬೀಳುವದು ಎಷ್ಟು ಭಯಂಕರ! ಅವನು ಹೋಗಲೇಬೇಕು. ಅದು ಆಗುವಂತಿಲ್ಲಾ. ಹಾಗೇ ದಾರಿಯಲ್ಲಿ ಸತ್ತರೆ? ಲೀಜಾ ನಾವು ಅವನಿಗೆ ಏನಾದರೂ ಕೊಡಬೇಕಿತ್ತು. ಪಾಪ ಅವನಿಗೂ ನಮ್ಮಂತೆ ಪಾರಣೆಮಾಡಿ ಉಪವಾಸ ಮುಗಿಸುವದಿತ್ತು."

ಸೂರ್ಯ ಮೇಲೆ ಬಂದಿದ್ದ. ಈಗ ಅವನು ಕುಣಿಯುವನೋ ಇಲ್ಲವೋ ಎಂಬುವ ಲಕ್ಷ್ಯ ಇವನಿಗಿಲ್ಲ. ಅನಂತರ ದಾರಿಯಲ್ಲಿ ಅವನು ಒಂದು ಉಸುರೂ ಬಿಡಲಿಲ್ಲ. ಕುದುರೆಯ ಆ ಕರಿಯ ಬಾಲವನ್ನು ಬಿಟ್ಟು ದೃಷ್ಟಿ ಕದಲಲಿಲ್ಲ. ಹಬ್ಬದ ಮೊದಲಿನ ಉತ್ಸಾಹವು ತಗ್ಗಿ, ಈಗ ತಾನು ಇಷ್ಟೇಕೆ ಸುಂದನಾಗಿದ್ದೇನೆಂಬುವದು ಅವನದು ಅವನಿಗೆ ಗೊತ್ತಾಗಲೊಲ್ಲದು. ಮನೆ ಬಂತು. ಅವರಿವರು ಬಂದರು. ನಮಸ್ಕಾರ ಚಮತ್ಕಾರಗಳೂ ಸಾಗಿದವು. ಮೊದಲಿನಕಿಂತ ಸ್ವಲ್ಪ ಮುಖದಲ್ಲಿ ಗೆಲುವು ಮೂಡಿತು. ಹತ್ತಿರ ಬಂದವರೊಡನೆ ಮಾತುಕತೆ ಆಡಿದ. ಪಾರಣೆಯ ಸಮಯ ಬಂತು. ಊಟಕ್ಕೆ ಕುಳಿತು ರೊಟ್ಟಿಯನ್ನು ತುಂಡುಮಾಡಿದ. ಮುಖವನ್ನು ಖಿನ್ನಮಾಡಿ ಹೆಂಡತಿಯನ್ನು ನೋಡುತ್ತಾ— "ಇಂದು ನಾವು ಆ ಕೊರ್ಸೇಕನಿಗೆ ಏನೂ ಕೊಡದೆ ಹಾಗೇ ಬಂದದ್ದು ಮಹಾ ಅಪರಾಧ. ಅವನ ಅವಸ್ಥೆ ಅನಾಥನಿಗಿಂತಲೂ ಕಡೆಯದಾಗಿತ್ತು. ತನ್ನ ಮನೆ ಮಾರು ದೂರ ಬಿಟ್ಟು ಹಾಗೆ ದಾರಿಯಲ್ಲಿ ಬೇನೆಯಿಂದ ಬಳಲುತಿದ್ದನು." ಟಾರಖಾವ ಸ್ವಲ್ಪ ಚಹ ಕುಡಿದ. ಅದೂ ಗಂಟಲ ಕೆಳಗೆ ಇಳಿಯಲಿಲ್ಲ. ತಿನ್ನಲಿಕ್ಕೆ ಯಾವುದೂ ಬೇಡವೆನಿಸಿತ್ತು. ಹಾಗೇ ಹೋಗಿ ಹಾಸಿಗೆಯಲ್ಲಿ ಮಲಗಿದ. ಲೀಜಾ ಮಬಗ ಹೋದಳು. ಎರಡು ತಾಸು ಕಳೆದ ನಂತರ,

ಲೀಜಾ ಎದ್ದಳು. ನೋಡುತ್ತಾಳೆ. ಇವನು ಕಿಟಕಿಯ ಹತ್ತಿರ ಏನೋ ನೋಡುತ್ತಾ ನಿಂತಿದ್ದನು.

"ಎದ್ದೇ ಇದ್ದೀರಲ್ಲಾ ?"

"ಏನು ಕಾರಣವೋ ತಿಳಿಯಲಿಲ್ಲ. ನಿದ್ರೆ ಬರಲಿಲ್ಲ. ಲೀಜಾ, ಇಂದು ಘೋರ ಅಪರಾಧ ಮಾಡಿದ್ದೇವೆ."

"ಮತ್ತೆ ಅದೇ ಕೊಸೇಕನು. ಸಾಕು, ತಲೆಯಲ್ಲಿಂದ ಆ ವಿಚಾರವನ್ನು ತೆಗೆದುಹಾಕಿರಿ—ಸಾಕು. !"

"ಈ ವರೆಗೂ ಅವನು ಶೂರನಿಗಾಗಿ ದುಡಿದ; ತನ್ನ ರಕ್ತವನ್ನೇ ಸುರಿಸಿದ. ಕೈ ನಿಂತಿತು. ನಾವೂ ಅವನನ್ನು ಪಶುವಿಗಿಂತ ಕಡೆಯಾಗಿ ಕಂಡೆವು. ಕರೆದುಕೊಂಡು ಬರಬೇಕಿತ್ತು. ನಮ್ಮಲ್ಲಿದ್ದ ಆಹಾರ ಕೊಟ್ಟು ಅವನನ್ನು ಸಂತೈಸಬೇಕಿತ್ತು."

"ಸಾಕು. ಸಾಕು, ನಿಮ್ಮ ಮಾತು. ನಾನಂತೂ ದಾರಿಯಲ್ಲಿ ಪ್ರಸಾದದ ದುರುಪಯೋಗ ಮಾಡಿಗೊಡಲಿಲ್ಲ." ಎಂದಳು. ಯಾವ ಮಾತೂ ಆಡುವ ಗೋಜಿಗೆ ಹೋಗದೇ ಟಾರಖಾವನು ಒಳಗೆ ಹೋಗಿ ಪ್ರಸಾದದ ರೊಟ್ಟಿಯ ತುಂಡುಗಳನ್ನು ವಸ್ತ್ರದಲ್ಲಿ ಕಟ್ಟಿದ. ಆಳನ್ನು ಕರೆದು ಆ ಕೊಸೇಕನನ್ನು ಎಲ್ಲಿದ್ದಲ್ಲಿ ಹುಡುಕಿ ರೊಟ್ಟಿಯ ತುಂಡುಗಳನ್ನು ಕೊಡುವದಕ್ಕಾಗಿ ವಿಧಿಸಿದ. ಆಳು ಕುದುರೆ ಏರಿ ಹೊರಟ. ಒಂದೆರಡು ತಾಸು ದಾರೀ ನೋಡಿದರೂ ಹೋದ ಆಳು ತಿರುಗಿ ಬರಲಿಲ್ಲ. ಇವನ ಶಾಂತತೆ ತನ್ನ ಸ್ಥಾನ ಬಿಟ್ಟಿತ್ತು. ಈಗ ತಾನೇ ಕುದುರೆ ಏರಿ ಹೊರಟ. ಕೊಳ್ಳದಲ್ಲಿಯೇ ಆಳು ಎದುರಾದ.

"ಕೊಸೇಕನು ಭೆಟ್ಟಿಯಾದನೆ ?"

"ಇಲ್ಲಾ. ಅವನು ಎಲ್ಲಿಯೂ ಕಾಣಲಿಲ್ಲಾ—ಅವನು ಈ ಮೊದಲೇ ಹೋಗಿರಬೇಕು."

ಅವನ ಕೈಯಲ್ಲಿಯ ಗಂಟನ್ನು ಇಸಿದುಕೊಂಡು ತಾನೇ ಮುಂದೆ ಸಾಗಿದ. ದಾರಿಯಲ್ಲಿ ಒಂದು ಹಳ್ಳ. ಅಲ್ಲಿ ಇಳಿದು ಹುಡುಕಿದ. ಅದನ್ನು ದಾಟಿ ಹೋಗುತ್ತಿರುವಾಗ ಎದುರು ಯಾರೋ ರೈತರು ಬರುತ್ತಿದ್ದರು. ಅವರನ್ನು— "ಬೇನೆಯಿಂದ ಬಳಲುತ್ತಿರುವ ಕೆಂಪನ್ನ ಕೂದಲಿರುವ ಕೊಸೇಕನನ್ನು ನೀವು

ನೋಡಿದಿರಾ" ಎಂದು ಕೇಳಿದನು. ಅದಕ್ಕೆ ಅವರು ಒಬ್ಬರ ಮೋರೆ ಒಬ್ಬರು ನೋಡುತ್ತಾ—ಯೋಚಿಸಿದಂತೆ ಮಾಡಿ ತಾವು ಯಾರನ್ನೂ ಕಂಡಿಲ್ಲವೆಂದು ಹೇಳಿದರು.

ಟಾರಖಾವನು ಮನೆಗೆ ಬಂದಾಗ ಊಟದ ಹೊತ್ತು.

"ನೀನು ಬೇಕಾದ್ದನ್ನು. ಆ ಕೊಸೇಕನ ಮೂರ್ತಿ ಕಣ್ಣು ಮುಂದೆ ಕಟ್ಟಿದಂತಿದೆ. ಮನಸ್ಸಿಗೆ ಶಾಂತಿ ಇಲ್ಲ. ಭಗವಂತನು ಯಾವ ದೇವತೆಯನ್ನೋ ಗಂಧರ್ವನನ್ನೋ ಕೊಸೇಕನ ರೂಪದಿಂದ ನಮ್ಮನ್ನು ಪರೀಕ್ಷಿಸಲು ಆ ದಾರಿಯಲ್ಲಿ ಕಳಿಸಿದ್ದನೋ ಏನೋ ? ಇಂಥ ಅದ್ಭುತಗಳು ಆಗ–ಈಗ ನಡೆಯುತ್ತಿವೆ. ಅಂತೂ ಲೀಜಾ, ನಾವು ಅವನನ್ನು ಹಾಗೆ ಕಡೆಯಾಗಿ ಕಾಣ ಬಾರದಿತ್ತು."

"ಏನಿದು ಹಗಲೆಲ್ಲಾ–ಅದೇ ಅದೇ–ಮಾತು." ಎಂದು ಲೀಜಾ ಬೇಸರಪಟ್ಟಳು.

"ನೀನು ಎಂಥ ನಿಷ್ಕರುಣೆ— "

"ಅದರಿಂದ ನನಗೇನು ? ಪವಿತ್ರ ಪ್ರಸಾದವನ್ನು ಸಿಕ್ಕ ಸಿಕ್ಕ ಕುಡುಕರಿಗೆ ಹಂಚುವುದೇ ? "

"ದಾರಿಯಲ್ಲಿ ಕಂಡ ಆ ಕೊಸೇಕನನ್ನು ನೀನು ಕುಡುಕನೆನ್ನುವಿಯಾ?"

"ಹೌದು, ಅವನೂ ಕುಡುಕನೇ."

"ಛೀ—ಆಶಕ್ಯ. ನೀನು ಮೂರ್ಖಳಿದ್ದೀ."

ಆ ದಿನವೆಲ್ಲ ಮನೆಯಲ್ಲಿ ರಾದ್ಧಾಂತ. ವಾದ ಪ್ರತಿವಾದ. ಇಷ್ಟೊಂದೂ ದಯಾಗುಣವಿಲ್ಲವಲ್ಲಾ ! ಎಂದು ಹೆಂಡತಿಯನ್ನು ತೆಗಳಿದ. ಅದು ಅತಿಯಾಯಿತು. ಹೆಂಡತಿಯು ತನ್ನ ತಂದೆಯ ಮನೆಗೆ ಹೋಗುತ್ತೇನೆಂದು ಹಟ ಹಿಡಿದಳು. ಮದುವೆಯಾದ ಮೇಲೆ ಇವರು ನ್ಯಾಯವಾಡಿದ್ದು ಇದೇ ಮೊದಲು. ಸಂಜೆ ಬಂತು. ಟಾರಖಾವನು ಹೊರಗೆ ಹೋಗಿದ್ದಾಗ ಕೂಡ ಇವೇ ವಿಚಾರಗಳ ತುಮುಲ ಯುದ್ಧ ನಡೆದಿತ್ತು. ಬದುಕು ಬೇಜಾರವಾಯಿತು. ಈ ವರೆಗೂ ಸುಂದರಿಯಾಗಿ ಕಾಣುತ್ತಿದ್ದ ಹೆಂಡತಿ ಈಗ ಅತಿ ಕುರೂಪಿಯಾಗಿ ಕಂಡಳು. ಈಕೆಯದು ಎಷ್ಟು ಕಠಿಣ ಹೃದಯವೋ ? ಛೀ ಆ ಕೊಸೇಕ ! ಎಲ್ಲಿ ಹೋದನೋ ? ಕ್ಲಾಂತನಾಗಿ ಎಲ್ಲಿ ಬಿದ್ದನೋ ? ಭಗವಂತಾ ! ಎಂದು

ನಿಟ್ಟುಸುರು ಬಿಡಹತ್ತಿದ ಮನೋನಭದಲ್ಲಿ ವ್ಯಗ್ರತೆಯ ಕಾರ್ಮೋಡಗಳು ತಾಕಲಾಡಹತ್ತಿದವು.

ಈ ವ್ಯಗ್ರತೆಯನ್ನು ಕಳೆಯುವದೆಂತು ? ಈ ಹೆಂಡತಿಯ ದುರ್ಮುಖ ತಪ್ಪಿಸುವದೆಂತು ? ಅದಕ್ಕೆ ಒಂದೇ ಒಂದು ದಾರಿ ! ಅದು ಮದ್ಯ ! ಮದುವೆಯಾದ ಮೇಲೆ ಆದೆಂದರೆ ಮುಟ್ಟದ ಇವನು, ಇಂದು ಅದಕ್ಕೇ ಶರಣುಹೋದ. ಆಯಿತು ಇಂದು ಪ್ರಾರಂಭ ! ಶಿಖರಕ್ಕೇ ಮುಟ್ಟಿತು. ಹೆಂಡತಿಗೆ ಸುಟ್ಟು ಮೋರೆಯವಳೆಂದ. ತನಗೆಲ್ಲಿವಳು ಗಂಟುಬಿದ್ದಳೆಂದು ಅಕ್ಕಸಬಟ್ಟ. ಅವಳನ್ನು ತಂದೆಯ ಮನೆಗೆ ಅಟ್ಟಿಯೇ ತೀರುತ್ತೇನೆಂದು ಪ್ರತಿಜ್ಞೆಮಾಡಿದ. ಮದ್ಯ ಕುಡಿಯುವದನ್ನು ಇನ್ನೇನು ಬಿಡುತ್ತೇನೆ. ಇದೇ ಕೊನೆಯದು ಎಂದು ಅವನು ಅನ್ನುತ್ತ ಅದರ ಸೆಳೆತಕ್ಕೇ ಜಾರಿಹೋದ.

ಅಂದಿನಿಂದ ದುಃಖಕ್ಕೆ ಕೊನೆ ಮೊದಲಿಲ್ಲ !

ಮೊದಲಿನ ಧನ-ಧಾನ್ಯ ಸಂಪತ್ತು ಈಗಿಲ್ಲ. ಯಾವಾಗಲೂ ಟಾರಖಾವನು ಕುಡಿದೇ ಇರುವನು. ಈಗ ತಲೆಯ ಮೇಲೆ ಸಾಲದ ಭಾರ ಮಿತಿಮೀರಿ ಬೆಳೆದಿದೆ. ಹೆಂಡತಿ ಎಂದರೆ ಅತಿ ಅಸಹ್ಯ. ಈ ಎಲ್ಲ ಅನರ್ಥಕ್ಕೆ ಅವಳೇ ಕಾರಣಳೆಂದು, ತನ್ನಲ್ಲಿ ತಾನು ಯೋಚಿಸುವನು. ಆ ಅನಾಥ ಕೋಸೇಕನನ್ನು ತೀರ ಅನಾದರ ದೃಷ್ಟಿಯಿಂದ ನೋಡಿದೆವೆಂತಲೆ, ದೇವರು ಈ ಶಿಕ್ಷೆಯನ್ನು ಮಾಡಿದನೆಂದು ನಿರ್ಧರಿಸುವನು.

ತನ್ನ ಸುತ್ತೂ ಇಷ್ಟೆಲ್ಲ ದುರಂತ ನಡೆದರೂ, ಲೀಜಾಗೆ ಮಾತ್ರ ಕೊನೆಗೂ ಅದರ ಕಾರಣ ತಿಳಿಯಲಿಲ್ಲ.

# ಟಾಂಗಾವಾಲಾ

ಮಸಕಮಸಕ ಮುಚ್ಚಂಜೆ. ಬೀದಿಯಲ್ಲಿ ದೀಪಗಳು ಹತ್ತಿದ್ದವು. ಮನೆಗಳ ಮಾಳಿಗೆಯ ಮೇಲೆ, ದೀಪಗಳ ಮೇಲೆ, ಬೀದಿಯಲ್ಲಿ ಹೋಗಿ ಬರುವವರ ಮೇಲೆ, ಮಂಜು ಪರೆಪರೆಯಾಗಿ ಬಿದ್ದು—ಅಲ್ಲಲ್ಲಿ ಒಟ್ಟುಗೂಡುತ್ತಿತ್ತು. ಟಾಂಗಾವಾಲಾ ಆಯೋನಾನ ಪಾಡು ಹೇಳಲಿಕ್ಕೆ ಬೇಡ! ಮೊದಲೇ ದೇಹವೆಲ್ಲ ಅರ್ಧಕ್ಕೆ ಮೀರಿ ಬಾಗಿದ್ದು. ಈಗಂತೂ ತುಂಬ ಹಿಮ ಬಿದ್ದು ಬೆಳ್ಳಬಿಳಿಯ ಒಂದು ಭೂತದಂತೆ ಕಾಣುತ್ತಿತ್ತು. ಆಗಿನಿಂದ ಟಾಂಗಾದ ಮುಂದುಗಡೆ ಕೂತವನು ಅತ್ತಯಿತ್ತ ಸರಿದಿರಲಿಲ್ಲ. ಒಂದು ವೇಳೆ ಹಿಮದ ಭಾರಿ ತುಂಡೊಂದು ಬಿತ್ತೆಂದು ತಿಳಿಯೋಣ; ಆಗಾದರೂ ಇವನು ಸರಿಯುವನೋ ಇಲ್ಲವೋ ಸಂಶಯ. ಅವನ ಸಣ್ಣ ಆ ತಟ್ಟು! ಅದರ ಅವಸ್ಥೆಯೂ ಅವನಂತೆಯೇ! ಅದು ಕಲ್ಲಿನ ರಚನೆಯೋ ಎಂದು ಅನ್ನುವಂತೆ ನಿಂತಿತ್ತು. ಪ್ರಾಣಿ ಯಾವ ಗಹನ ವಿಚಾರದಲ್ಲಿ ತಲ್ಲೀನವಾಗಿತ್ತೋ? ಅಥವಾ ಪರಿಸ್ಥಿತಿಯೇ ಅಂಥಾದ್ದು! ಅಷ್ಟೇಕೆ? ದಿನದ ಬಳಿಕೆಯ ವಾತಾವರಣವನ್ನು ತಪ್ಪಿಸಿ ನಿಮ್ಮನ್ನು ಕಣ್ಣುಕುಕ್ಕುವ ಬೆಳಕಿನಲ್ಲಿ, ಜನರಿಂದ ಗಿಜಿಗಿಜಿಯಾದ ಬೀದಿಯಲ್ಲಿ ತಂದು ಬಿಟ್ಟರೆ ನಿಮ್ಮ ಅವಸ್ಥೆಯೂ ಹೀಗೇ ಆದೀತು. ನೀವೂ ವಿಚಾರದಲ್ಲಿ ತಂದ್ರಿತರಾಗದೆ ಇರಲಾರಿರಿ.

ಬಾಡಿಗಿ ಇಲ್ಲದೆ ಆಯೋನಾ ಇಲ್ಲಿ ನಿಂತು ಎಷ್ಟೋ ಹೊತ್ತಾಗಿತ್ತು. ಸಂಜೆಯ ಮಂಜು ಹಾಗೇ ಬೀಳುತ್ತಿದೆ. ಈಗ ದೀವಿಗೆಗಳಿಂದ ಥಾಳವಾದ ಬೆಳಕು. ಜನರ ಗದ್ದಲ ಹೆಚ್ಚು ಸ್ಪಷ್ಟವಾಗಿ ಕೇಳಿಸುತ್ತಿದೆ.

"ಟಾಂಗಾ" ಒಮ್ಮೆಲೇ ಯಾರೋ ಕೂಗಿದರು.

ಆಯೋನಾ ಕಣ್ಣು ಹೊಸೆಯುತ್ತಾ ನೋಡಿದನು. ಎದುರು ಯಾರೋ ಆಫೀಸರರು ನಿಂತಿದ್ದಾರೆ. ಮೈತುಂಬ ಕೋಟು ಹಾಕಿದ್ದಾರೆ.

"ವಿಬರ್ಗದಾರಿಗೆ ಹೊಡಿ"

ಆಫೀಸರು ಗಾಡಿ ಏರಿದರು. ಆಯೋನಾ ಕೈಯಲ್ಲಿ ಲಗಾಮು ತಕ್ಕೊಂಡನು. ಒಳಗೆ ಆಫೀಸರು ಬಿಗುವಿನಿಂದ ಕುಳಿತಿದ್ದಾರೆ. ಗಾಲಿಗಳು ಉರುಳುತ್ತಿವೆ; ಹಿಮ ಜಾರುತ್ತಿದೆ. ರೂಢಿಯಂತೆ ಕುದುರೆಗೆ ಚಾಟಿಸ ಏಟುಗಳು ಬೀಳುತ್ತಿವೆ. ಆಯೋನಾನ ಬಾಯಿ ಲೊಚಗಟ್ಟುತ್ತಿದೆ. ಕುದುರೆ ಕಟ್ಟಿಗೆಯಂತಿರುವ ತನ್ನ ಕಾಲನ್ನು ಎತ್ತೆತ್ತಿ ಹಾಕುತ್ತಿದೆ. "ಏ ಎತ್ಲಾಗ ಹೊಡೀತಿ? " ಎಂದು ಕತ್ತಲೆಯಲ್ಲಿಂದ ಯಾರದೋ ಧ್ವನಿ ಕೇಳಬರುತ್ತಿದೆ.

"ಹೀಂಗ್ಯಾಕೋ–ತೊಗೊ ಬಲಕ್ಕs! ದನಾಕಾಣಸ್ತೀದಿ!" ಇನ್ನೊಂದು ಧ್ವನಿ.

"ಧಂದೇ ಮಾಡೊಂವ ಅಲ್ಲ ನೀ! ತೊಗೊ ಬಲಕ್ಕs!" ಗಾಡಿಯಲ್ಲಿ ಕುಳಿತ ಆಫೀಸರರು ಗದ್ದರಿಸಿದರು. ದಾರಿಯಲ್ಲಿ ರಾಯರ ಗಾಡಿ ಹೊಡೆಯುವ ಆಳು ಗುಣಗುಟ್ಟಿದ– ಅಡ್ಡ ಹೋದವನು ಅವನೇ–ಮೇಲೆ ಅವನದೇ ಹೆಚ್ಚು ಬಾಯಿ. ಇನ್ನೊಬ್ಬ ಯಾವನೋ ಸ್ವಲ್ಪ ಗಾಡಿ ತಾಕಿದ್ದಕ್ಕಾಗಿ ಕಣ್ಣು ಕಿಸಿದ. ಆಯೋನಾ ಸೂಜಿಗಳ ಮೇಲೆ ನಿಂತವನಂತೆ ಹೊಯ್ದಾಡುತ್ತಾನೆ. ಸಮತೋಲಕ್ಕೆ ಬರಬೇಕೆಂದು ಯತ್ನ ಮಾಡುತ್ತಿರುವನೊ ಎನ್ನುವಂತೆ, ಮುಂಗೈಯನ್ನು ಹಾಗೆ–ಹೀಗೆ ಅಲುಗಿಸುತ್ತಾನೆ. ಉಬ್ಬಸ ಪಡುತ್ತ ಎದುರು ನೋಡುತ್ತಾನೆ.

"ಯಾಕೋ ಎಲ್ಲಾರು ನಿನ್ನ ಹಿಂದ ಕೈತೊಳಕೊಂಡೇ ಬೆನ್ನು ಹತ್ತಿದ್ದಾರಲ್ಲೊ? ಆಗಿನಿಂದ ನಿಂದೂ ನಿನ್ನ ಕುದುರಿದೂ ಉದ್ಧಾರಾಸ ನಡಿಸಿದ್ದಾರಲ್ಲಾ" ಒಳಗಿನ ಆಫೀಸರು ಚೇಷ್ಟೆ ಮಾಡಿದರು.

ಏನೋ ಹೇಳಬೇಕೆಂದು ಆಯೋನಾ ತಿರುಗಿ ನೋಡಿದನು. ತುಟಿಗಳು ಅಲುಗುತ್ತಿವೆ; ಅತಿ ಆತುರದ ಭಾವ ಮುಖದ ಮೇಲೆ ಕಾಣುತ್ತದೆ; ಆದರೆ ಮಾತುಗಳೇ ಹೊರಬೀಳಲೊಲ್ಲವು!

"ಏನಂದೀ?" ಒಳಗಿನ ಆಫೀಸರರು ಕೇಳಿದರು.

ಆಯೋನಾ ಮೋರೆ ಕಿವುಚಿ ಮುಗುಳು ನಗೆ ತಂದು, ಗಟ್ಟಿಯಾಗಿ ನುಡಿದ.

"ಮೊನ್ನೆ ನನ್ನ ಮಗ ಬೆಕಿನ್ ತೀರಿಕೊಂಡಾ—"

" ಏನಾಗಿತ್ತು ? "

ತನ್ನ ಇಡೀ ದೇಹವನ್ನೇ ಆಚೆಗೆ ತಿರುಗಿಸಿದ. ಹೇಳಲು ಅಣಿಯಾದ. ಮಾತುಗಳು ಹೊರಬಿದ್ದವು.

" ಯಾರಿಗೆ ಗೊತ್ತು ಏನಾಗಿತ್ತೆಂದು ? ಯಾರೊ ಅಂದರು–ವಿಷಮ ಜ್ವರವೆಂದು ! ದವಾಖಾನೆಯಲ್ಲಿ ಮೂರು ದಿನ ಇದ್ದ–ದೇವರ ಮನಸ್ಸಿಗೆ ಹಾಗೆ ಬಂತು ! "

" ತಿರುಗೋ ಏ ಕತ್ತೇ— ! " ಕತ್ತಲೆಯಿಂದ ಧ್ವನಿ ಬಂತು.

" ಕಣ್ಣು ಯಾತಕ್ಕವ ? " ಮತ್ತೊಂದು ಧ್ವನಿ.

" ಹೂ ದಾರಿ ಸಾಗಲಿ– ದಾರೀ. ಹೀಂಗ ನೀ ಹೊಡೆದರೆ ನಾವು ಮುಟ್ಟೋದು ನಾಳಿಗೆ ! " ಆಫೀಸರರು ನುಡಿದರು.

ಆಗ ಆಯೋನಾ ಸರಿಯಾಗಿ ಕುಳಿತನು. ಕುತ್ತಿಗೆ ಮುಂದೆ ಚಾಚಿದನು. ಕೈಯಲ್ಲಿ ಚಾಟಿ ತಕ್ಕೊಂಡ. ಮುಖದ ತುಂಬೆಲ್ಲ ವಿಷಾದ ಆವರಿಸಿತ್ತು. ಆಗಾಗ ಆರ್ತನಾಗಿ ಹಿಂದಿರುಗಿ ನೋಡುವನು. ಒಳಗಿನವನೋ– ಏನೂ ಕೇಳುವ ಮನಸ್ಸಿಲ್ಲದವನಂತೆ ಕಂಣು ಮುಚ್ಚಿಕೊಂಡು, ಬಿಕ್ಕೊಂಡು ಕುಳಿತಿದ್ದಾನೆ ! ವಿಬರ್ಗವು ಬಂತು. ದಾರಿಯ ಪಕ್ಕದ ಹೊಟೆಲಿನ ಹತ್ತಿರ ಆಫೀಸರರು ಇಳಿದರು. ಆಯೋನಾ ಸ್ವಲ್ಪ ಮೈ ಕೈ ಅಲುಗಾಡಿಸಲು ಅನುವು ಮಾಡಿಕೊಂಡು, ತನ್ನ ಜಾಗದಲ್ಲಿಯೆ ಮೈ ಸೈಲು ಬಿಟ್ಟು ಕುಳಿತ. ಮತ್ತೆ ಮೊದಲಿನಂತೆ ಸ್ಥಿರದೇಹಿ. ಸ್ಥಿರ ದೃಷ್ಟಿ. ಮೇಲಿನಿಂದ ಹಿಮ ಬಿದ್ದು–ಅವನನ್ನೂ ಅವನ ಕುದುರೆಯನ್ನೂ ಮುಚ್ಚುತ್ತಿತ್ತು. ಹೀಗೆ ಒಂದು–ಎರಡು ತಾಸುಗಳು ಕಳೆದುವು !

ಕಾಲುದಾರಿಯ ಅಂಚಿನಿಂದ ಯಾವುದೊ ಒಂದು ಗುಂಪಿನ ಸದ್ದು ಕೇಳಬಂತು. ಮೂರೇ ಜನ ಆ ಗುಂಪಿನಲ್ಲಿ. ಇಬ್ಬರು ಸ್ವಲ್ಪ ತೆಳುವು ಎತ್ತರ ಆಳು; ಇನ್ನೊಬ್ಬ ಗಿಡ್ಡ ಟುಮುಕ. ಅವರವರಲ್ಲಿ ಏನೋ ಚರ್ಚೆ ! ನಡೆದಿತ್ತು.

" ಏ ಗಾಡೀ– ಪೋಲೀಸಬ್ರಿಜ್ಜಿಗೆ. " ಟುಮುಕ ಕೇಳಿದ " ನಾವು ಮೂರು ಮಂದಿ. ಎರಡು ರೂಪಾಯಿ. " ಆಯೋನಾ ಚಾಟಿ ಎತ್ತಿದ. ತುಟಿಯ ಮೇಲೆ ನಾಲಗೆ ಆಡಿಸಿದ. ಎರಡು ರೂಪಾಯಿ ಏತಕ್ಕಾಗಬೇಕು ?

ಎಲ್ಲಿಗೆ ಹತ್ತೀತು ? ಆದರೂ ಬಾಡಿಗೆ ಬಿಡುವಂತಿಲ್ಲಾ, ನಾಲ್ಕಾಣೆ ಎಂಟಾಣೆ ಹೊಡೆಯಲೇ ಬೇಕು. ಹೆಚ್ಚು ವಿಚಾರ ಬೇಡ. ಬಂದಷ್ಟು ಬರಲಿ. ತರುಣರ ಬಾಯಿಂದ ಅವಾಚ್ಯ ಶಬ್ದಗಳು ಹೊರಬೀಳುತ್ತಿವೆ. ಅವರವರಲ್ಲಿ ಏನೋ ತಂಟೆ. ಯಾರು ಇಬ್ಬರು ಕೂಡುವದು ? ನಿಲ್ಲುವವರೊಬ್ಬರು ಯಾರು,? ಸರಿ ವುತ್ತೆ ನ್ಯಾಯ. ಎಲ್ಲರೂ ಒಮ್ಮೆಲೇ ಗಾಡಿಯಲ್ಲಿ ಧುಮುಕಿದರು. ಅಲ್ಲಿ ಮೂವರದೂ ತಿಕ್ಕಾಟ. ಖೊಳ್ಳನೇ ನಗೆಯ ಆರ್ಭಟೆ. ಕೊನೆಗೆ ಉದ್ದನ್ನವರು ಕುಳಿತು ಟುಮುಕ ನಿಲ್ಲಬೇಕೆಂದು ನಿರ್ಣಯ ಮಾಡಿಕೊಂಡರು. ಕೊನೆಗೆ ಆ ಟುಮುಕ ಆಯೋನಾನಿಗೆ—

"ಎಂಥಾ ಕಿರೀಟ ಹಾಕೀಯೋ ? ಇಡೀ ಪೀಟ್ಸ್‌ಬರ್ಗವಲ್ಲಿ ಇಂಥಾದ್ದಿಲ್ಲಾ ನೋಡು ಹ ಹ" ಎಂದು ಜೇಷ್ಟೆ ಮಾಡಿದ.

"ಹೆ ಹಿ" ಆಯೋನಾ ಕಿಸಿ ಕಿಸಿ ನಕ್ಕನು. "ಇಂಥಾದ್ದೇ—" ಆಯೋನಾನ ಮಾತು ಅಲ್ಲಿಗೇ ನಿಂತಿತು.

"ಏ ಇಂಥಾದ್ದೇ! ಸಾಕು-ಸಾಕು ದಾರಿ ಸಾಗಲೀ—ದಾರೀ! ಈ ಗತಿಯಿಂದ ಯಾವಾಗೊ ನಾವು ಮುಟ್ಟೋದು. ಬೆನ್ನು ಮೇಲೆ ಕೊಡ್ಲೇನು ? ಒಂದು ಗುದುಕೀ—"

"ನನ್ನ ತಲೀ ಸಿಡಿಯುತ್ತಿದೆ ನೋಡು" ಆ ಬಡಕಾಟಿಗಳಲ್ಲಿ ಒಬ್ಬನೆಂದ.

"ಅಲ್ಲಾ-ನಿನ್ನೆ ರಾತ್ರೀ ಎಷ್ಟದು ತೊಗೊಂಬೋದು ? ನಾನು ವಾಸ್ಕಾ-ಕೂಡಿ ನಾಲ್ಕು ಬಾಟ್ಲೀ ಚಟ್."

"ಸಾಕು ಬಿಡೋ ನಿನ್ನ ಸುಳ್ಳು.! ಹೇಳತೇನಿ ಹೇಳತೇನಿ ಅಂತ ಎಷ್ಟು ಗುಳಗೀ ಹೊಡೆಯೋದು"

ಇನ್ನೊಬ್ಬ ಬಡಕಾಟಿ ನುಡಿದ.

"ಏಃ ಇಲ್ಲೋ ದೇವರ ಆಣೆಂದ್ರೂ—" ದೇಶಾವರಿ ನಗೀ ನಕ್ಕ.

"ನಿನ್ನ ಮಾತು ಕೇಳಿದರ ಕತ್ತೆಗೆ ಜ್ವರ ಬರತಾವ. ಹಿ-ಹಿ"

ಇವರೊಡನೆ ಆಯೋನಾನೂ ನಗಹತ್ತಿದ. ಇವರೆಲ್ಲರೂ ಎಷ್ಟು ಸುಖಿಗಳಾಗಿರುವರೆಂದು ಅವನಂದುಕೊಂಡ.

"ಸಾಕು-ಸಾಕು ಸುಮ್ಮನ್ನಿರೀ !" ಆ ಟುಮುಕನೆಂದ.

" ಹೊಡಿ. ಹೊಡಿ ಏ ಬುಡ್ಡಾ–! ಎಲ್ಲಿ ಕಲಿತ್ತಿದ್ಯೊ ಹೊಡೀಲಿಕ್ಕೇ–! ಚಾಟಿ ಯಾಕಿಟ್ಟೆದಿ ಪೂಜೀ ಮಾಡ್ಲಿಕ್ಕೆ ? "

" ಹಾಕು ಹಾಕು ನಾಲ್ಕೇಟು. " ಇನ್ನೊಬ್ಬನೆಂದ

ಆಯೋನಾನಿಗೆ ತನ್ನ ಪಕ್ಕಡಿಯಲ್ಲಿ ಯಾರೊ ತಿವಿಯುತ್ತಿರುವಂತೆ ಭಾಸವಾಯಿತು. ಬಾಯಿಗೆ ಬಂದಂತೆ ಅವರು ಅವನ ಅಪಮಾನ ಮಾಡುತ್ತಿದ್ದಾರೆ. ಅವರು ಮೂವರು, ತಾನೊಬ್ಬ ಎಂಬ ಕಲ್ಪನೆ ಹೊಳೆಯುತ್ತದೆ. ಟುಮುಕನ ಉದ್ಗೋಉದ್ಗಾದ ಒಂದು ಆಶೀರ್ವಾದ (?) ಕೇಳಿಸುತ್ತದೆ. ಕೆಮ್ಮುತ್ತಾನೆ ಅವನು. ಸುತ್ತೂ ನಸು ಶಾಂತವಾದೀತೆ ಎಂದು ದಾರೀ ಕಾಯುತ್ತಾನೆ. ಮತ್ತೆ ಹಿಂದಿರುಗಿ—

" ಮೊನ್ನೆ ನನ್ನ ಹುಡುಗ ತೀರಿಕೊಂಡ—"

" ಎಲ್ಲರೂ ಹೋಗೋದs ಒಂದಿನ— " ಟುಮುಕ ಅನ್ನುತ್ತ ತುಟಿ ಚಪ್ಪರಿಸಿದ. ಆಗಿನಿಂದ ಅವನು ಕೆಮ್ಮುತ್ತಿದ್ದ.

" ಹೂ ಹೂ ಅವಸರಮಾಡು ನಮ್ಮ ಹಾದಿ ಸಾಗಲಿ. ಹೀಂಗs ಹೋದರ ಅಲ್ಲಿಗೆ ಮುಟ್ಟೋದು ನಾವು ಯಾವಾಗ ? "

" ಅಲ್ಲೆ ಇದ್ದೀದಿ. ಸ್ವಲ್ಪ ಹುರುಪು ಮಾಡು ಅವನ್ನ–! ಬೆನ್ನ ಮೇಲೆ ಕೊಡು ಒಂದು ಗುದಿಕಿ ! " ಇನ್ನೊಬ್ಬನೆಂದ.

" ಏ ಬುಡ್ಡಾ ಏನಂತಿ ? ಜೇಗ ಹೊಡಿತೀಯೋ ? ಬೇಕೊ ಗುದಿಕೀ ? ನಿನ್ನ ಕಾಯಕ ನೀ ಬಿಡದಿದ್ರ ಇಳಿದು ಬಿಡ್ತೀವಿ ನೋಡು. "

ಆಯೋನಾನಿಗೆ ಗುದಿಕೆ ಗೊತ್ತಾಗುವದಿಲ್ಲ. ಮಾತು ಕೇಳಿಸುತ್ತದೆ. "ಅವರು ಸುಖಿಗಳು. ದೇವರು ಅವರನ್ನು ಹಾಗೆ ಇಡಲಿ" ಎನ್ನುವನು.

" ಏ ಟೊಂಗಾವಾಲಾ, ನಿನ್ನ ಲಗ್ನ ಆಗೇದೇನೋ ? "

" ಹೆಂಡತಿನ್ನ ಬಿಟ್ಟು ಇನ್ನಾರೂ ಇಲ್ಲಾ ನನಗs. ಆಕಿ....ಗೋರಿಗಾಗಿ. ಒಂದು ತುಂಡು ಭೂಮಿ–ಇಷ್ಟೇ ನಂಬು ಈಗ. ಇದ್ದ ಒಬ್ಬ ಮಗ ಹೋದ ಚೀಟಿ ಬದ್ಲಾತು. ನಾ ಹೋಗಿ, ಅಂವ ಉಳಿಯಬೇಕಿತ್ತು. ನಾ ಉಳಕೊಂಡೆ. ಅಂವ ಹೋದ. ಸಾವೂ ನನ್ನ ನೋಡಲಿಲ್ಲಾ. "

ಮಗ ತೀರಿದ ವಿಷಯ ಹೇಳಲು ಹಿಂದಿರುಗಿದ ಆಯೋನಾ. ಆ ಟುಮುಕ ಹೊರಗೆ ನೋಡಿ "ಬಿಡು ಮಹಾರಾಯಾ! ಜಾಗಕ್ಕೆ ಮುಟ್ಟಿಸಿದೀ! "

ಆವರು ಕತ್ತಲೆಯಲ್ಲಿ ಇಳಿದು ಹೋಗುವದನ್ನು ಆಯೋನಾ ನೋಡಿದನು. ಸುತ್ತು ಮುತ್ತಲಿನ ವಾತಾವಾರಣ ಸ್ತಬ್ಧವಾಗಿತ್ತು. ಈ ವರೆಗೂ ಹತ್ತಿಕ್ಕಿದ ದುಃಖ ಹೃದಯುವನ್ನು ತುಂಬಿ ಇಮ್ಮಡಿಯಾಗಿ ಈಗ ಮುಂದೂಡುತ್ತಿದೆ. ಯಾವನಾದರೊಬ್ಬನ ಮುಂದೆ ತನ್ನ ದುಃಖ ತೋಡಿಕೊಂಡು, ಎದೆ ಹಗುರು ಮಾಡಿಕೊಳ್ಳಲು ಬಂದೀತೇ ಎಂದು ಅತ್ತ ಇತ್ತ ಓಡಾಡುವ ಜನರಿಂದ ಕಿಕ್ಕಿರಿದ ಆ ಬೀದಿಯಲ್ಲಿ ಅವನು ಕಕ್ಕಾವಿಕ್ಕಿಯಾಗಿ ಕಣ್ಣು ಬಿಟ್ಟ. ಎಲ್ಲರೂ ತಮ್ಮತಮ್ಮಲ್ಲಿ ಗುಂಗು! ಅವರಿಗೆ ಇವನ ಕಡೆಗೆ ಎಲ್ಲಿ ಲಕ್ಷ್ಯ? ಅವಕಾಶ ವೆಲ್ಲಿ? ಇವನ ದುಃಖದ ಉರುಬೂ ಅಪಾರ. ಒಂದು ವೇಳೆ ಎದೆ ಗುಂಡಿ ಒಡೆದು ಹೊರ ಚೆಲ್ಲಿತೋ ವಿಶ್ವದ ಉದ್ದ–ಅಗಲಕ್ಕೂ ತುಂಬೀತು. ಆದರೆ ಈಗ–ಈಗ ಅದು ಯಾರ ದೃಷ್ಟಿಗೂ ಬೀಳುವಂತಿಲ್ಲ. ಅದು ಈಗ ಹುದುಗಿ ಕೊಂಡಿದೆ—ಒಂದು ಚೂರು ಎದೆಗೊಳವಿಯಲ್ಲಿ. ಇದು ಆಶ್ಚರ್ಯ. ದೀಪ ಹಚ್ಚಿ ಹುಡುಕಿದರೂ ಅದು ಸಿಕ್ಕುವಂತಿಲ್ಲ.

ದಾರಿಯಲ್ಲಿ ಯಾವನೋ ಒಬ್ಬ ಕೂಲಿ ನಿಂತಿದ್ದ. ಅವನೊಡನೆ ಯಾದರೂ ನಾಲ್ಕು ಮಾತು ಆಡಲು ದೊರಕೀತೇ ಎಂದು ಆಶಾಬದ್ಧ ನೋಟ ದಿಂದ ನೋಡಿ "ತಮ್ಮಾ ಈಗ ಹೊತ್ತೆಷ್ಟು?"

"ಒಂಬತ್ತು ಆಗಿ ಹೋತು! ಹೊಡಿ ಮುಂದೆ."

ಆಯೋನಾ ನಾಲ್ಕು ಹೆಜ್ಜೆ ಮುಂದೆ ಹೋಗುತ್ತಾನೆ. ಮೈಯನ್ನು ಮುಂದೆ ಚಾಚುತ್ತಾನೆ. ತನ್ನ ದುಃಖ ತಾನೇ ನುಂಗುತ್ತಾನೆ. ಮತ್ತೊಬ್ಬರ ದಾರಿ ತನಗೇಕೆ? ಐದು ನಿಮಿಷ ಕಳೆದವು. ದುಃಖದ ಚುರುಕು ಹೆಚ್ಚಾಗು ತ್ತದೆ. ಬುದ್ಧಿಯನ್ನು ಸ್ಥಿರಪಡಿಸಿಕೊಳ್ಳುತ್ತಾನೆ. ಕುದುರೆಗೆ ಮರಿಕುದುರೆಯ ನೆನಪು ಆಗುತ್ತದೆ. ಛೇ, ಇನ್ನು ಇಲ್ಲಿದ್ದು ಉಪಯೋಗವಿಲ್ಲ– ಎಂದು ಕೊಂಡು ಹೊರಡುತ್ತಾನೆ.

ತಾಸೆರಡು ತಾಸು ಕಳೆದಿದ್ದೀತು. ಈಗ ಆಯೋನಾ ಅಗ್ಗಿಷ್ಟಿಕೆಯ್ಯ ಎದುರು ಕುಳಿತಿದ್ದ. ಸುತ್ತೂ ಬಂಚಿನ ಮೇಲೆ ತೇವಾದ ಭೂಮಿಯ ಮೇಲೆ ಗೊರಕೆ ಹೊಡೆಯುತ್ತಾ ಜನ ಮಲಗಿದೆ. ಹೊರಗೆ ಕೂರ್ಗಾಳಿ ಉಬ್ಬಸ ಬಡುವಂತಿತ್ತು. ಆಯೋನಾ ಮೇಲೆ ನೋಡುತ್ತಾ ಕಾಲು ಚಾಚಿದನು. ತಾನು ಬೇಗನೆ ತಿರುಗಿಬಿಟ್ಟದ್ದರಿಂದ ದಿನವ ಅನ್ನವನ್ನೂ ಇಂದು ಗಳಿಸಿಲ್ಲ

ವಲ್ಲಾ! ಎಂದು ಮರುಗುತ್ತಾನೆ. ಇವರೆಲ್ಲ ಗಳಿಸಿದ್ದಾರೆ; ಸುಖವಾಗಿ ಮಲಗಿದ್ದಾರೆ. ಆದರೆ ಅವನೊ?

ಹತ್ತಿರ ಮಲಗಿದ ಇನ್ನೋರ್ವ ಟಾಂಗಾವಾಲಾ ನಿದ್ದೆಗಣ್ಣಿನಲ್ಲಿ ನೀರಿನ ಬಕೆಟ್ಟಿನ ಕಡೆಗೆ ಕೈ ಮಾಡಿದ.

"ಏನು? ನೀರು ಬೇಕೆ?"

"ಬೇಡಾ—" ಉತ್ತರ ಬಂತು.

"ಬಿಡಪ್ಪಾs—ನಿಂದು ಒಳ್ಳೇ ಪ್ರಕೃತಿ. ತಮ್ಮಾ ಕೇಳು– ಲಕ್ಷ ಕೊಡುವಿಯಾ? ನನ್ನ ಬೆಕಿನ್ ತೀರಿಕೊಂಡ ಮೊನ್ನೆ ಮೊನ್ನೆ ಹೋದವಾರ. ಆದೊಂದು ಪುರಾಣವೇ ನೋಡು"

ತನ್ನ ಮಾತಿನ ಪರಿಣಾಮವೇನಾಯಿತೆಂದು ನಿರೀಕ್ಷಿಸಿದನು. ಆದರೆ ಅವನೊ ತುಂಬ ಮುಸುಕು ಹಾಕಿ ಗೊರಕೆ ಹೊಡೆಯಹತ್ತಿದ್ದಾನೆ.

ಈ ಮುದುಕ ನಿಟ್ಟುಸಿರಿಟ್ಟು ತಲೆ ಕೆರೆದುಕೊಳ್ಳುತ್ತಾನೆ. ಇವನಿಗೆ ಮಾತು ಬೇಕು. ಮಗ ಸತ್ತು ಒಂದು ವಾರವಾಗಿದೆ. ಯಾರ ಮುಂದಾದರೂ ನಿದಾನವಾಗಿ ಎಳೆ–ಎಳೆದು ಆ ಸಂಗತಿ ಹೇಳಬೇಕು. ಅವನು ಬೇನೆ ಬಿದ್ದದ್ದು, ತೀರುವಾಗ ಅವನು ಹೇಳಿದ್ದು ಅವನು ಅನುಭವಿಸಿದ ಭವಣೆ, ಮುಂದೆ ಅವನ ಸ್ಮಶಾನ ಯಾತ್ರೆಯ ವರ್ಣನೆ, ಆ ಮೇಲೆ ಅವನ ಅರಿವೆ ತರಲು ದವಾಖಾನೆಗೆ ಹೋದ ಪ್ರಸಂಗ, ಯಾರ ಮುಂದಾದರೂ ತೋಡಿಕೊಳ್ಳಬೇಕು. ಆ ಮಗಳು ಅವಳದೂ ಈಗ ನೆನಪಿಗೆ ಬರುತ್ತದೆ. ಅವಳೋ ದೂರದ ಹಳ್ಳಿಯಲ್ಲಿದ್ದಾಳೆ. ಅವಳ ಬಗ್ಗೆ ನಾಲ್ಕು ಮಾತು ಹೇಳಬೇಕು. ತನ್ನ ದುಃಖದಲ್ಲಿ ಯಾವನನ್ನೊ ಸಂಗಾತಿಯನ್ನಾಗಿ ಮಾಡಿಕೊಳ್ಳಬೇಕು. ಅವನ ಒಂದು ಅಯ್ಯೋ ಎನ್ನುವ ಶಬ್ದ, ದುಃಖದಲ್ಲಿ ಒಂದಾದಾಗ, ಅವರಿವರ ಕಣ್ಣಲ್ಲಿ ಮಿಂಚುವ ಸಹಾನುಭೂತಿಯ ಝುಳುಕು! ಸಾಕು ಅಷ್ಟೇ!

ಇದಷ್ಟನ್ನೇ ಆಯೋನಾ ಅಪೇಕ್ಷಿಸಿದರೆ,– ಅನೈಸರ್ಗಿಕವೇನು?

ಕುದುರೆಯನ್ನಾದರೂ ನೋಡಿಕೊಂಡು ಬರಲೇ ಎಂದು ಲಾಯಕ್ಕೆ ಹೋಗುತ್ತಾನೆ. ಕಾಳು ಹುಲ್ಲು ಹವೆಗಳ ವಿಚಾರ ತಲೆಯಲ್ಲಿ ಬರುತ್ತವೆ. ಈಗ ಹತ್ತಿರ ಯಾರೂ ಇಲ್ಲ. ಮಗನ ವಿಷಯ ಮರೆಯುತ್ತಿದೆ. ಈಗಿನ

ವಿಚಾರದ ಓಟ ತನ್ನನ್ನೇ ಕುರಿತು ನಡೆದಿದೆ. ಏನು ತನ್ನ ಅವಸ್ಥೆ ? ತನ್ನದೇ ಭೀಕರ ಚಿತ್ರ ಅವನ ಕಣ್ಣು ಮುಂದೆ ನಿಲ್ಲುತ್ತದೆ. ಈಗ ಅವನು ಅಸಹಾಯನು ! ಅತ್ತ ಇತ್ತ ನೋಡುತ್ತಾನೆ.

ಲಾಯದಲ್ಲಿ ಕುದುರೆ ಹುಲ್ಲು ತಿನ್ನುತ್ತಿದೆ. “ನಾವು ಇಂದು ಗಳಿಸಿದ್ದು ಒಂದು ದಿನದ ಕಾಳಿಗೂ ಆಗಲಿಲ್ಲಾ, ಆಗಲಿ ಇಬ್ಬರಿಗೂ ಹುಲ್ಲೇಗತಿ. ಅಂವಾ ಇದ್ರೇಽ ಹೀಂಗಾಗುತ್ತಿರಲಿಲ್ಲಾ. ಗಾಡಿ ಹೊಡೀಲಿಕ್ಕೆ ಯಾರಿದ್ರು ಅವನ್ಹಾಂಗಽ” ಎಂದ. ಮತ್ತೆ ಸ್ಥಬ್ಧನಾಗುತ್ತಾನೆ. “ಆಗೋದು ಆಗಿ ಹೋತು. ನನ್ನ ಬಿಟ್ಟಾ. ತಾ ಹೋದ ! ತಿಳಕೊ ನಿನ್ನ ಮರೀ ಹೋತು ನೀ ಉಳಿಕೊಂಡೀ ಅಳಲಿಕ್ಕೆ ! ಹಾಂಗಾತು ನನ್ನ ಅವಸ್ಥೆ.”

ಕುದುರೆ ಮೆಲಕು ಹಾಕುತ್ತದೆ. ಹೇಳಿದ್ದು ಕೇಳುತ್ತದೆ. ಇವನ ಕೈ ಮೇಲೆ ಉಸುರುಗರೆಯುತ್ತಿದೆ. ಇದನ್ನು ನೋಡಿ ಆಯೋನಾನು ಆನಂದ ಪಟ್ಟು ತನ್ನ ಕತೆಯನ್ನು ಅದಕ್ಕೇ ಹೇಳುತ್ತಾನೆ.



# ಕಳೆದ ಚಣ!

ಆ ಊರ ಸ್ಮಶಾನದಲ್ಲಿಯ ಚರ್ಚು ಬೀಳುವಂತಾಗಿತ್ತು. ಅದನ್ನು ಸರಿಪಡಿಸುವದಕ್ಕೆ ವುರ್ಝುಲಕೋವ್ಸ್ಕಿ ಇಂಜಿನಿಯರನ್ನು ನೇಮಿಸಿದ್ದರು. ವಾಸ್ತವವಾಗಿ ವುರ್ಝುಲಕೋವ್ಸ್ಕಿನ ಹುಟ್ಟೂರಿ ಇದು. ಅವನು ಬೆಳೆದದ್ದು, ಸಾಲಿ ಕಲಿತದ್ದು ಇಲ್ಲಿಯೇ! ಆದರೆ ಇಂದು ನಿಲ್ದಾಣದಲ್ಲಿ ಇಳಿದಾಗ ಅವನ ಊರು ಅವನಿಗೇ ಗೊತ್ತಾಗಲೊಲ್ಲದು. ಎಲ್ಲ ಅಷ್ಟು ಅದಲು ಬದಲು! ಈಗ ನಿಲ್ದಾಣದ ಭಾರೀ ಕಟ್ಟಡವಿದ್ದಲ್ಲಿ, ಹದಿನೆಂಟು ವರುಷಗಳ ಹಿಂದೆ ಹುಡುಗರು ಭೋರಂಗೀ ಹುಳ ಹಿಡಿಯುತ್ತಿದ್ದರು; ಈಗ ಆ ಹೆದ್ದಾರಿಯ ಪಕ್ಕದಲ್ಲಿ ವಿಶಾಲವಾಗಿ ಎದ್ದು ನಿಂತಿರುವ ಆ ಖಾನಾವಳಿ ಇದ್ದಲ್ಲಿ; ಆಗ ಹರುಕು-ಮುರುಕು ಗುಡಿಸಲಿನಂತಹದೇನೋ ಒಂದು ಇತ್ತು. ಇದು ಜಡ ಸ್ಥಿತಿಯ ಹಣೆಬರಹವಾದರೆ, ಊರ ರಹಿವಾಸಿಗಳಲ್ಲಿ ಆದ ಮಾರ್ಪಾಡಂತೂ ಹೆಚ್ಚಿನದಾಗಿತ್ತು. ಹೋಟಿಲದಲ್ಲಿ ಪರಿಚಾರಕನನ್ನು ಕುರಿತು ಯಾರಾರ ಹೆಸರನ್ನೋ ಕೇಳಿದ. ಅವರೆಲ್ಲ ಇವನ ಗುರುತಿನವರು. ಕೆಲವರು ಸತ್ತಿದ್ದರು; ಉಳಿದವರು ದರಿದ್ರರಾಗಿದ್ದರು. ಅವರ ಹೆಸರು ಅಳಿಸಿದಂತೆಯೇ ಸರಿ.

ಕೊನೆಗೆ ವುರ್ಝುಲಕೋವ್ಸ್ಕಿನು ಪರಿಚಾರಕನನ್ನು ಕುರಿತು ತನ್ನ ವಿಷಯವನ್ನೆ ಎತ್ತಿದ.

ನೀನು ವುರ್ಝುಲಕೋವ್ಸ್ಕಿನನ್ನು ಬಲ್ಲೆಯಾ? ತನ್ನ ಹೆಂಡತಿಗೆ ಸೋಡಚೀಟಿ ಕೊಟ್ಟ ಆ ಇಂಜಿನಿಯರ ಅವನೊ! ಇಲ್ಲೇ ಸ್ವಿರೆಸ್ಕೀ ಗಲ್ಲಿಯಲ್ಲಿದ್ದನಲ್ಲ. ಅವನ ನೆನವು ನಿನಗಿರಬೇಕು!

"ಇಲ್ಲ, ಇಲ್ಲ, ನನಗ ಗೊತ್ತಿಲ್ಲ ಅವರದು?"

"ಇಲ್ಲ! ಆಶ್ಚರ್ಯ ಬಿಡು. ಇಡೀ ಊರಾಗ ಆ ಸೋಡಚೀಟಿ ಮಾತಾಗಿತ್ತು. ಇಲ್ಲಿಯ ಟಾಂಗಾದವನಿಗೂ ಅದು ಗೊತ್ತಿತ್ತು. ಇಲ್ಲಿ ಆ

ಶ್ಯಾಪಕಿನ್ ವಕೀಲಿದ್ದಾನಲ್ಲಾ ಅವನೇ ನಡಿಸಿದಾ—ಆ ಖಟ್ಲೇ–. ಭಾರಿ ಲುಚ್ಚಾ ಬಿಡು ಅಂದಾ ಒಮ್ಮೆ ಭರ್ತೀ ಕೋರ್ಟಿನಾಗ ಬಿದ್ದವು ನೋಡು ಅವಂಗ ಬಡ್ತಾ !"

" ಹಾ ಹಾ ಆ ವಕೀಲ್ರs ನೀವು ಹೇಳೋದು ? "

" ಅಂವಾ ಈಗ ಇದ್ದಾನೋ–ಸತ್ತಾನೋ – ? "

"ಇದ್ದಾರs ಯಥೇಚ್ಛ ಇದ್ದಾರ! ಈಗ ಅವರು ದೊಡ್ಡ ಹುದ್ದೇದಾರರು! ಅವರದೇ ಸ್ವತಂತ್ರ ಕಚೇರಿ! ಕೈಯಲ್ಲಿ ಕಾರಕೂನರು. ಈಗ ಅವರದು ಒಳ್ಳೇ ಏರಿಕೇ ! ಕಿರಿವಿಚಿನ ಬೀದಿಯಲ್ಲಿ ಎರಡು ಮನೆ ಕಟ್ಟಿದ್ದಾರೆ. ಮೊನ್ನೆ ಅವರ ಮಗಳ ಲಗ್ನವಾಯಿತು. "

ವುರ್ಝುಲಕೋವ್ಹನು ಝೋಲಿಯಲ್ಲಿ ಶತಪಥ ಹಾಕುತಿದ್ದನು. ಸುಮ್ಮನೇ ಕೂಡುವದಕ್ಕಿಂತ ಶ್ಯಾಪಕಿನ್‌ನ ಭೆಟ್ಟಿಗಾದರೂ ಹೋಗೋಣವೆಂದು ನಿಶ್ಚಯಿಸಿದ.

ಕಚೇರಿಯಲ್ಲಿ ಶ್ಯಾಪಕಿನ್‌ನ ಭೆಟ್ಟಿಯಾಯಿತು. ನೋಡಿದ ಶ್ಯಾಪಕಿನ್‌ನು ಅಹುದೋ ಅಥವಾ ಅಲ್ಲವೊ ಅನ್ನುವ ಹಾಗಾಗಿದ್ದ. ಆಗ ಏನು ಅವನ ಗಡಿಬಿಡಿ! ಎಷ್ಟು ಜರ್ಬು? ಆಗ ಕುಡಿದು ಚಿತ್ತನಾಗಿರುತ್ತಿದ್ದ ವ್ಯಕ್ತಿ ಈಗ ಅದೆಷ್ಟು ಮೆತ್ತಗಾಗಿತ್ತು ! ಮುಖ ಜೋಲು ಬಿದ್ದಿದೆ. ತಲೆ ನರೆತು ಹೋಗಿದೆ.

ವುರ್ಝುಲಕೋವ್ಹನೇ ಮಾತು ಮೊದಲು ಮಾಡಿದ.

" ಯಾಕೋ ಗುರುತು ಹತ್ತಲಿಲ್ಲs! ನಾನೊ ನಿನ್ನ ಹಳೇ ಪಕ್ಷಗಾರ ವುರ್ಝುಲಕೋವ್ಹ! "

" ವುರ್ಝುಲಕೋವ್ಹ ! ಓಹೊ–ನೀನs "

ಶ್ಯಾಪಕಿನ್‌ನ ನೆನೆಕವಾಟ ತೆರೆದ, ತಲೆ ಕೆರೆದುಕೊಂಡ; ಗುರುತು ಹತ್ತುತಲೇ ಆಶ್ಚರ್ಯದ ಉನ್ಮಾದದಿಂದ ಉಬ್ಬಿ ಪ್ರಶ್ನೆಗಳ ಮೇಲೆ ಪ್ರಶ್ನೆಗಳ ಮಳೆಗರೆದ.

" ಹೆಚ್ಚಿಂದು ಬಿಡು ಇದು ! ಈಗ ನಿನ್ನ ಸ್ವಾಗತ ಹ್ಯಾಂಗ ಮಾಡ್ಲೀ ಹೇಳು ನಾನು! ಬಾಟ್ಲೀ ತರಿಸಲೀ ? ಅಥವಾ ಮತ್ತೇನಾದರೂ ! ಆಗ

ನಾನು ಅಲ್ಪಸ್ವಲ್ಪ ದುಡ್ಡು ತಿಂದಿಲ್ಲಾ ನಿಂದೂ! ಆ ನಿನ್ನ ಸಾಲಾ ಈಗ ತೀರಸ್ತೇನೀ!"

"ಸುಮ್ಮನೇ ಇಷ್ಟು ಗಡಿಬಿಡಿ ಮಾಡಿಕೋ ಬ್ಯಾಡಾ ನೀನು! ನನಗ ಹೊತ್ತಿಲ್ಲಾ! ಇಲ್ಲಿ ಸ್ಮಶಾನದಲ್ಲಿಯ ಆ ಚರ್ಚಿನ ಕೆಲಸಕ್ಕೆ ನನ್ನನ್ನೇ ನಿಯಮಿಸಿದ್ದಾರೆ! ನಾ ಬಂದದ್ದು ಅದಕ್ಕೇ! ಈಗ ನಾ ಅಲ್ಲಿಗೆ ಹೊಂಟೇನಿ."

"ಬಹಳ ಚಲೋ ಆತು, ಸ್ವಲ್ಪ ಬ್ರ್ಯಾಂಡಿ ತಕ್ಕೊಳ್ಳೋಣ. ಆ ಮ್ಯಾಲೆ ಇಬ್ಬರೂ ಕೂಡಿ ಅತ್ಲಾಗ ಹೋಗೋಣ. ನಂದು ಗಾಡಿ ಅದ. ಕುದುರೀನ್ನರ ನೋಡು ನಂದು. ನಾನು ಚರ್ಚಿನ ತನಕ ಬರತೀನಿ. ಅಲ್ಲಿ ಯವರ ಪರಿಚಯ ನಿನಗೆ ಮಾಡಿಕೊಡತೇನಿ. ಇನ್ನೇನು ಬೇಕು. ಹೀಗೆ ಬಾರೋ ನನ್ನ ಹತ್ರ! ಆಗಿನವನಲ್ಲ ನಾನು. ಹೌದು ಆಗ ನಾ ಹಾಂಗಿದ್ದೆ. ಯಾರದೂ ಆಟ ಸಾಗುತ್ತಿರಲಿಲ್ಲ. ಈಗ ಅದೆಲ್ಲಾ ಹೋತು. ವಯಸ್ಸೂ ಆತು. ಎದಿ ಉದ್ದ ಹುಡುಗರು ಬೆಳೆದಿವೆ. ಇನ್ನು ಉಳಿದುದೆಂದರೆ ಸ್ಮಶಾನಕ್ಕೆ ಹೋಗೋದೊಂದೇ"

ಎಷ್ಟೋ ವರುಷಗಳ ನಂತರ ಇಬ್ಬರೂ ಭೆಟ್ಟಿಯಾದದ್ದು. ಹಳೆಯ ಸ್ನೇಹಿತರು. ಮದ್ಯ ಕುಡಿದು ಗಾಡಿಯಲ್ಲಿ ಕುಳಿತರು.

ಗಾಡಿಯಲ್ಲಿ ಕುಳಿತಾಗ ಶ್ಯಾಪಕಿನ್ನ ಹಿಂದಿನ ಕತೆಯನ್ನೆಲ್ಲ ನೆನಪುಮಾಡಿ ಕೊಂಡು ಒಡ ಒಡ ಹಚ್ಚಿದ್ದ.

"ಆ ದಿವಸ ಎಂಥಾವು! ಈಗ ಬಾ ಅಂದ್ರ ಬಂದಾವ? ಆಗಿದ್ದವರು ನಾವೋ ಅಥವಾ ಮತ್ತಾರೋ-ಅನ್ನೊ ಹಾಂಗ ಆಗೇದ. ನೀನು ನಿನ್ನ ಹೆಂಡತಿಗೆ ಸೋಡಚೀಟಿ ಕೊಟ್ಟೀ–, ಅದಾಗೇ ಈಗ ಇಪ್ಪತ್ತು ವರುಷಾತು. ಸ್ವತಃ ನಿನಗ ನೆನಪದನೋ ಇಲ್ಲೋ! ನನಗದ. ನಿನ್ನೆ–ಮೊನ್ನೆ ನಡೆದಂತೆ ನೆನಪಿದೆ. ಎಷ್ಟು ತಾರಾ ತಿಗಡಿ ಮಾಡಬೇಕಾತು ಆಗ. ಇಂಥಾ ಬ್ಯಾಟಿ ಬಂದ್ರ ನಾನೂ ಆಗ ಚತುರ್ಭುಜ! ಅಪ್ಪಿ ತಪ್ಪೀ ನಿನ್ನಂಥಾ ದುಡ್ಡು ಕೊಡೊ ಗಿರಾಕಿ ಸಿಕ್ರ ಕೇಳತಿಯಾ ಆ ಹೊಡ್ತಾ! ಹಿಂಡಿ ಹಿಂಡಿ ಬಿಡುತ್ತಿದ್ದೆ! ನೀನು ಆ ಅಯಿದೊ-ಆರೊ ಸಾವಿರ ಕೊಟ್ಟೆ. ಪೀಟರ್ಸಬರ್ಗಕ್ಕೆ ಹೋದಿ. ಆ ಮೇಲೆ ಆಕಿನ್ನ ಕೈ ತೊಳಕೊಂಡೇ ಬೆನ್ನುಹತ್ತಿದೆ. ನಿನ್ನ ಹೆಂಡತೀ ಕೊಮುಟೇ ಮಗಳು–ಅಂದ ಮೇಲೆ ಕೇಳತಿಯಾ ಆಕಿ ಸಿಟ್ಟೇನು? ಸೆಡವೆಷ್ಟು? ಅಳ್ಳುರದಾಂಗ

ಮಾತೇನು ? ಅಂಥಾಕಿನ್ನ ದುಡ್ಡಿನ ಆಶೆತೋರಿಸಿ ವ್ಯಭಿಚಾರದ್ದ ಆರೋಪಕ್ಕೆ ಒಪ್ಪಿಸೋದಂದ್ರ ನನ್ನ ಪುಣ್ಯ ಎಲ್ಲಾ ಖರ್ಚಾತು. ನಾ ಆವಳ ಮನೆಗೆ ಹೋದೆ. ಆಕಿ ದಾಸಿ ಕಡೆಗೆ ನೋಡುತ್ತಾ "ಇವನ್ಯಾಕ ಒಳಗ ಬಿಟ್ಟೇ ನೀ ಈ ತುಡುಗನ್ನs" ಅನ್ನುವಳು. ಕಾಗದಾ ಬರೆದರೆ ಉತ್ತರಿಲ್ಲಾ. ಬಹಳ ಕಾಡಿದ್ಲು ಬಿಡು. ನೀ ಯಾವಾಗ ಹತ್ತು ಸಾವಿರದ ಅಂಕೀ ಹೇಳಿದಿ—ಆಗ ಆ ಕೆಲಸಾತು. ಆಗು—ಎಷ್ಟು ಚಿಟಕಿ ಮುರುದ್ಲು ಛೀ—ಛೀ—ಸಾಕಾಗಿ ಹೋತಪಾ ! ಕಡೀಗೆ ವ್ಯಭಿಚಾರಿ ಆರೋಪಕ್ಕೆ ಒಪ್ಪಿದ್ಲು. s—"

ವುರ್ಝುಲಕೋವ್ಹ ನಡುವೆ ಬಾಯಿ ಹಾಕಿ—

"ಹತ್ತು ಸಾವಿರ—ಅದ್ಯಾಕ ನೀ ನನ್ನ ಕೈಯಿಂದ ಇಸಗೊಂಡದ್ದು ಹದಿನೈದು ಸಾವಿರ !"

ಶ್ಯಾಪಕಿನ್ ಸ್ವಲ್ಪ ಗೊಂದಲದಲ್ಲಿ ಬಿದ್ದು "ಹೌದು. ಹೌದು. ಹದಿನೈದು ಸಾವಿರ. ಈಗ್ಯಾಕ ಆ ಮಾತು. ಆತು ಹೋತು. ಈಗ ಹೇಳತೇನಿ ಕೇಳು. ಆ ಹದಿನೈದು ಸಾವಿರದಲ್ಲಿ ಆಕೀಗೆ ನಾ ಕೊಟ್ಟದ್ದು ಹತ್ತು ಸಾವಿರ. ಬಾಕೀ ಅಯಿದು ಸಾವಿರ ಹಾಕಿದೆ ಕಿಸೇಕ್ಕs—. ಆ ಮಾತು ಹೇಳಲಿಕ್ಕೆ ಈಗೇಕೆ ನಾಚಿಕೆ. ನಿನ್ನಂಥಾ ಕೋಡೋವಾ ಸಿಕ್ಕಾಗ ಹಾಂಗs ಬಿಡೋದ ? ನಿಂದೂ ಗಳಿಕಿ ಆಗ ಎಂಥಾದಿತ್ತು. ನನಗೆ ಗೊತ್ತಿಲ್ಲs ಅದು. ಒಂದೊಂದು ಕಂತ್ರಾಟ ಬಂತೂ ಅಂದ್ರ ಇಪ್ಪತ್ತು ಸಾವಿರದ ಕೆಳಗೆ ಮಾತಾಡತಿರಲಿಲ್ಲ ನೀನು ! ಲಹರ ಬಂತು ಲಗ್ನಾದಿ. ಲಹರ್ ಹೋತು ! ಕೊಟ್ಟೆ ಸೋಡಚೀಟಿ !! ನೀ ತಿಂದ್ರು ಜನ ನಿನಗೆ ಭಲೆ ಎಂದೆನ್ನುತ್ತಿತ್ತು. ನಾ ಏನೊ ಚೂರುಚಾರಕ್ಕೆ ಕೈ ಹಾಕಿದರೆ—ಕ್ಲಬ್ಬಿನಲ್ಲಿ ಎಷ್ಟು ಟೀಕಾ ಮಾಡತಿದ್ರು. ಚುಚ್ಚಿ ಮಾತಾಡೊದೆಷ್ಟು ! ಅವೆಲ್ಲಾ ಮಾತು ಈಗ್ಯಾಕ ! ಅವನ್ನ ಮರೀಬೇಕು.

ವುರ್ಝುಲಕೋವ್ಹನಿಗೆ ಆ ಹೆಂಡತಿಯು ನೆನಪಾಗಿ— ಕೇಳಿದ—

"ಮುಂದ ಅವಳ ಅವಸ್ಥೆ ಏನಾತು ?"

"ಆಗೋದೇನು ? ತೀರ ಕೆಳಗೆ ಹೋದಳು. ವ್ಯಭಿಚಾರದ ಆರೋಪಕ್ಕೆ ಅವಳು ತನ್ನ ಮನಸ್ಸಿನಿಂದ ಒಪ್ಪಿದ್ದಿಲ್ಲಾ. ಹುಚ್ಚು ಹುಡುಗಿ ಹತ್ತು ಸಾವಿರದ ಅಂಕಿ ನೋಡಿದ ಕೂಡಲೇ ಬುದ್ಧಿ ಹೋತು. ಆ ಮೇಲೆ ತಾ ಮಾಡಿದ್ದು ಏನಾಯಿತೆಂದು ಗೋಳಿಟ್ಟಳು. ಅದೂ ಅಲ್ಲದೆ ನಿನ್ನ ಮೇಲೆ ಅವಳ ಪ್ರೀತಿ

ಇದ್ದೇ ಇತ್ತು. ಆ ವಿರಹದ ಉರುಬು ಹೆಚ್ಚಾತು. ಕುಡಿಲಿಕ್ಕೆ ಕಲತ್ಲು. ಯಾರ-ಯಾರೋ ಆಫೀಸರರ ಬೆನ್ನುಹತ್ತಿ ತಿರುಗಹತ್ತಿದಳು. ಸಾದಾ ಮದ್ಯ ದಿಂದ ಅವಳಿಗೆ ಉಪಯೋಗವಾಗುತ್ತಿರಲಿಲ್ಲ. ಬ್ರ್ಯಾಂಡಿನೇ ಬೇಕಾಗುತ್ತಿತ್ತು."

"ಎಂದಾದರೂ ಅವಳ ಸ್ವಭಾವಾನೆ ಅಂಥದು! ಬಹಳ ಲಹರಿ!" ಪುರ್ಝುಲಕೋವ್ಹ ಮುಂದುವರಿಸಿದ. ಸ್ವಲ್ಪ ಹೆಚ್ಚು ಕಡ್ಮಿ ಆತು. ಆಳೊ ದೆಷ್ಟು! ಜಡಿ ಅಪ್ಪಳಿಸೋದೇನು! ಮುಂದೇನಾತು"

ಒಂದಿನಾ ನಾ ಏನೋ ಬರೆಯುತ್ತಾ ನನ್ನ ಕೋಣೆಯಲ್ಲಿ ಕುಳಿತಿದ್ದೆ. ಬಾಗಿಲು ಬಡಿಧಾಂಗಾತು. ತಿರುಗಿ ನೋಡಿದೆ ಇವಳು! ಬಂದವಳೇ ನೋಟಿನ ಪುಡಿಕಿ ಒಗದ್ಲು "ತೊಗೊಳ್ರಿ ಬೆಂಕೀ ಹಚ್ರಿ ಇವನ್ನs" ನಾ ಎಣಿಸಿದೆ. ಅಯಿದು ನೂರು ಕಡ್ಮಿಯಾಗಿದ್ದವು.

"ನೀ ಆ ಒಂಬತ್ತುವರಿ ಸಾವಿರಾ ಏನು ಮಾಡಿದಿ?" .

"ಆತು ಹೋತು ಇನ್ನೇಕೆ ಆ ಮಾತು ಮುಚ್ಚಿಡೋದು. ಅವನ್ನ-ಅವನ್ನ ನಾ ನೆಗವಿ ಹಾಕಿದೆ. ಇನ್ನು ಮುಂದೆ ಕೇಳು. ಅದರ ಮುಂದೆ ಕಾದಂಬರಿ ಏನು? ಕಾದಂಬರೀ! ಒಂದು ರಾತ್ರಿ ನಾ ಮನಿಗೆ ಹೊರಟಿದ್ದೆ ನನ್ನ ಖೋಲಿ ಬಾಗಿಲ ತೆರೆದು ದೀಪಾ ಹಚ್ಚಿದೆ. ಎದುರಿಗೆ ನಿನ್ನ ಹೆಂಡತಿ ಸೋಫಿಯಾ. ಹುಚ್ಚರ ಆಸ್ಪತ್ರೆಯಿಂದ ಬಂದವಳಂತಿತ್ತು. ಹಾಗೆ ಹೀಗೆ ಕೈಮಾಡುತ್ತ—

"ನನ್ನ ಬುದ್ಧಿ ಈಗ ಬದಲಾಗೇದ. ಸತ್ಯಾನಾಶ ಮಾಡಿಕೊಳ್ಳೋದೆ ಆದ ಮೇಲಿ ಸುಖಾಪಟ್ಟು ಮಾಡಿಕೋತೇನಿ. ನನ್ನ ದುಡ್ಡು ನನಗ ಕೊಡ್ರೀ!" ಹೀಗೆ ಅನ್ನುತ್ತಾ ನನ್ನ ಮೈಮೇಲೆ ಬಂದಳು.

"ಏ ಎಲ್ಲಾ ದುಡ್ಡೂ ಆಕೀಗೆ ಕೊಟ್ಟೇ?"

"ಕೊಟ್ಟೆ! ಹತ್ತರವ್ಯಾಲಿ ಬಗೀಹರಿಸಿದೆ-!

ಪುರ್ಝುಲಕೋವ್ಹನ ಮುಖ ಇಷ್ಟಾತು.

"ನೀ ಹಾಂಗ ಮಾಡಬಾರದಿತ್ತು. ನನಗೆ ಬರೆದಿದ್ದೀ ಅಂದರೆ ನಾ ಕಳಿಸುತ್ತಿದ್ದೆ. ಆಯ್ಯೋ ಇದೆಲ್ಲ ಅನರ್ಥ ನನಗೆ ತಿಳಿಯಲಿಲ್ಲಾ-ಕಲ್ಪನೆಯೂ ಬರಲಿಲ್ಲಾ—"

" ಅವಳು ದವಾಖಾನೆಯಲ್ಲಿ ಬಿದ್ದಾಗ- ನಿನಗೆ ಕಾಗದ ಬರೆದಿದ್ದಳು. ಅದರಿಂದ ಯಾವುದೂ ಆಗಲಿಲ್ಲ ! "

"ಹೌದು, ಅವಳ ಕಾಗದ ಬಂದಾಗ ನಾ ಎರಡನೆ ಲಗ್ನದ ಮಠದಲ್ಲಿದ್ದೆ. ಮತ್ತೊಬ್ಬರ ಕಾಗದ ನೋಡಲು ಅವಕಾಶವೆಲ್ಲಿ ನನಗೆ ಆಗ. ನಾ ಕೈ ಬಿಟ್ಟರೂ ನೀ ಬಿಡಬಾರದಿತ್ತು—"

" ನನ್ನ ಈಗಿನ ನಡತೆ ನೋಡಿ ಆಗಿನ ಲೆಖ್ಖಾ ಹಾಕಬೇಡ ನೀನು. ಅಷ್ಟೇಕೆ ಈಗ ಅವಳು ಒಂದು ಕೇಳಿವರ ಸಾವಿರ ರುಬೆಲ್ ಕೊಟ್ಟೇನು ! ಆದರೆ ಆಗ ನಾ ಕೊಟ್ಟ ಆ ಹತ್ತು ರುಬೆಲ್ ಸುಮ್ಮನೆ ಕೊಟ್ಟೆನಲ್ಲಾ ಎಂದು ನನ್ನ ಮನಸ್ಸು ಆಗ ಹೇಳಿತು. ಅದೆಲ್ಲ ಸಾಕು. ನಾವು ಬಂದೇ ಬಿಟ್ಟೆವು. "

ಇಬ್ಬರೂ ಗಾಡಿಯಿಂದ ಇಳಿದರು. ಇಟುಕರವಾದ ದಾರಿ ಹಿಡಿದು ನಡೆಯ ಹತ್ತಿದರು ದಾರಿಯ ಇಬ್ಬದಿಗೂ ಗಿಡಗಳ ಝುಡುಪು ಇತ್ತು. ಎಲೆಗಳಿಲ್ಲದೆ ಬರಲಾದ ಗಿಡಗಳ ಮೇಲೆ ಸಿಲುಬೆಯ ಆಕೃತಿಗಳ ಮೇಲೆ, ಗೋರಿಗಳ ಮೇಲೆ ಮಂಜುಬಿದ್ದು, ಬೆಳ್ಳಿಯ ಮುಲಾಮು ಮಾಡಿದಂತಿತ್ತು. ಸೂರ್ಯನ ಕಿರಣಗಳು ಬಿದ್ದು ಹಿಮದ ಕಣ-ಕಣವೂ ಥಳಥಳ ಹೊಳೆಯುತ್ತಿದ್ದವು. ಸ್ಮಶಾನಕ್ಕೆ ಸಹಜವಾದ ಅದೆ ಮೇಲೆ ತೆಗೆದ ಮಣ್ಣಿನ ವಾಸನೆಯೂ ಆಗಾಗ ಬರುತ್ತಿತ್ತು.

ಪ್ರಿಝುಲಕೋವ್ಹ ಮಾತಾಡಿದ.

" ಎಂಥ ಸ್ಮಶಾನ ಇದು ! ಒಂದು ತೋಟವಾಗಿದೆ ತೋಟ ! "

" ಹೌದು. ಆದರೆ ಕಳ್ಳರ ಕಾಟ ಇಲ್ಲಿಯೂ ತಪ್ಪಿಲ್ಲಾ. ಶಿಲುಬೆಯ ಮೇಲೆ ಕೆತ್ತಿದ ಬೆಳ್ಳಿಯ ಅಕ್ಷರಗಳನ್ನು ಎಬ್ಬಿಸೋದೆ ಒಂದು ಧಂದೆಯಾಗಿದೆ ಈ ತುಡುಗರಿಗೆ.— ಆಚೆ ಬದಿ ಸೊಫಿಯಾನ ಗೋರಿಯಿದೆ. ನೀ ಹೋಗೋಣ ಎಂದರೆ ಹೋಗೋಣ. "

ಮಂಜನ್ನು ಎಡವುತ್ತ—ಈ ಇಬ್ಬರು ಸ್ನೇಹಿತರು ಸೋಫಿಯಾನ ಗೋರಿಯ ಹತ್ತಿರ ಬಂದರು. ಶ್ಯಾಸಕಿನ್ನನು " ಇದೇ, ಇದೇ ನೋಡು. ಯಾವನೊ ಸೈನ್ಯದಲ್ಲಿದ್ದವನು— ಮೇಲೆ ಹೆಸರಿನ ಕಲ್ಲನ್ನು ಕೂಡಿಸಿದ್ದಾನೆ. "

ವುರುಘುಲಕೋವ್ಹ ಮೆಲ್ಲನೆ ಟೊಪ್ಪಿಗೆ ತೆಗೆದ. ತಲೆಯ ಮೇಲೆ ಬಿಸಿಲು ಬಿತ್ತು. ಇದನ್ನು ನೋಡಿ ಶ್ಯಾಪಕಿನ್ನನೂ ತನ್ನ ಟೊಪ್ಪಿಗೆ ಎತ್ತಿದ. ಆಗ ಇನ್ನೊಂದು ಬೋಳು ತಲೆಯು ಬಿಸಿಲಿನಲ್ಲಿ ಮಿಂಚಹತ್ತಿತು. ಸ್ಮಶಾನವೇ ಅದು. ಸುತ್ತಲೂ ಸ್ತಬ್ಧವಾಗಿತ್ತು. ಹವೆಯು ಜೀವಕೂ ಹೋಗಿತ್ತೊ ಎಂದು ಅನ್ನುವಂತಿತ್ತು. ಆ ಇಬ್ಬರೂ ಸೋಫಿಯಾನ ಗೋರಿ ನೋಡುತ್ತಾ-ಯಾವುದೊ ವಿಚಾರದಲ್ಲಿ ಮಗ್ನರಾದರು. ಒಂದೂ ಮಾತಿಲ್ಲ. ನೀರವ. ಕೊನೆಗೆ ಶ್ಯಾಪಕಿನ್ನನೇ ಮಾತಾಡಿದ.

" ಈಗ ಇವಳು ಸುಖಿ. ಅದು ಹೇಗೆಂದರೆ— ತಾನು ವ್ಯಭಿಚಾರದ ಆರೋಪ ಹೊತ್ತುಕೊಂಡದ್ದೂ– ಕುಡಿಯುವದನ್ನು ಕಲಿತದ್ದೂ–ಯಾವುದೂ ಇವಳಿಗೆ ಜ್ಞಾಪಕವಿಲ್ಲ. ಆದರೆ ಗೆಳೆಯಾ, ಒಂದು ಮಾತು ನೀನು ಒಪ್ಪಲೇ ಬೇಕು."

" ಅದಾವುದು ? "

" ಆಗಿನ ಗಾಳಿ, ದಿನಗಳೇ ಒಳ್ಳೇವು. ಅವು ಎಷ್ಟೇ ಕೆಟ್ಟವಿರಲಿ. ಅವೆ ಒಳ್ಳೆಯವು ! " ತಲೆಯ ಮೇಲೆ ಉಳಿದ ನಾಲ್ಕೇ ನಾಲ್ಕು ಕೂದಲುಗಳ ಮೇಲೆ ಕೈಯಾಡಿಸುತ್ತ ಶ್ಯಾಪಕಿನ್ನನು ಮುಂದುವರಿಸಿದ.

" ಆಗ ಮರಣವೆಂದರೆ ಏನು ಮಹಾ ಎನ್ನುತ್ತಿದ್ದೆ. ಪ್ರಸಂಗ ಬಂದರೆ ಒಂದು ಕೈ ನೋಡೇಕೀರುತ್ತೇನೆ ಎನ್ನುವ ಸೊಕ್ಕು ಇತ್ತು. ಈಗ ಮಾತ್ರ– ಮಾತಾಡಿ ಏನು ಉಪಯೋಗ. ".

ವುರುಘುಲಕೋವ್ಹನ ಹೃದಯ ದುಃಖದಿಂದ ಬಿರಿಯುವಂತಾಗಿತ್ತು. ಆಗ ಹೆಣ್ಣಿನ ಪ್ರೀತಿಗಾಗಿ ತಾನು ಎಷ್ಟು ತಳಮಳಿಸುತ್ತಿದ್ದನೋ ಅಷ್ಟೇ ತೀವ್ರ–ತರವಾದ ಭಾವದಿಂದ ಭೋರಿಟ್ಟು ಅಳಲೇ ಎನ್ನುವಂತಾಗಿತ್ತು. ಕಣ್ಣೀರುದುರಿದರೆ ಮನಸ್ಸು ಹಗುರಾದೀತೆಂದು ಇವನಿಗನಿಸುತ್ತಿತ್ತು. ಸುಮ್ಮನೆ ಸ್ವಲ್ಪ ಕಣ್ಣು ಒದ್ದೆಯಾದವು. ಕುತ್ತಿಗೆ ಶಿರ ಉಬ್ಬಿದವು. ಅಷ್ಟೆ! ಹತ್ತಿರ ಶ್ಯಾಪಕಿನ್ ನಿಂತಿದ್ದ. ಇವನಿಗೆ ತನ್ನ ಹೃದಯದಲ್ಲಿಯ ದುಃಖ ಗೊತ್ತಾಗುವ ದಲ್ಲವೆನ್ನುವ ಭಾವ ಚಿಗುರೊಡೆಯಿತು. ಚಟಕ್ಕನೆ ಓಡುತ್ತಾ ಚರ್ಚಿನೊಳಕ್ಕೆ ಹೊಕ್ಕ. ಚರ್ಚಿನಲ್ಲಿ ಅದು–ಇದು ಮಾತಾಯಿತು. ಈಗ ಗೋರಿಯ ಹತ್ತಿರ ಕಣ್ಣೀರು ಸುರಿಸಲೇ ಎಂದು ಮತ್ತೆ ಹೊರಗೆಹೋದ.

ಸೋಫಿಯಾನ ಗೋರಿಯ ಮೇಲಿನ ಆ ಸಣ್ಣ ಬಿಳಿಯ ಕಲ್ಲು ಒಂದು ಸಣ್ಣ ಬಾಲಿಕೆಯಂತೆ ಕಂಡಿತು. ದುಃಖಪೂರಿತ ಕಣ್ಣಿನಿಂದ ಅದು ತನ್ನನ್ನೇ ನೋಡುತ್ತಿದೆಯೋ ಎಂದು ಭಾಸವಾಯಿತು. ಹುಗಿಯಲ್ಪಟ್ಟವಳು ತನ ಹೆಂಡತಿಯಲ್ಲ, ಯಾವುದೊ ಬಾಲಿಕೆಯಿರಬೇಕೆನ್ನುವ ಭ್ರಾಂತಿಯುಂಟಾಯಿತು.

ಕಣ್ಣಿನಿಂದ ನೀರು ಸುರಿಯಲೆಂದು ಎಷ್ಟೋ ಎಣಿಸಿದ.

ಆ ಕ್ಷಣ ಆಗಲೇ ಹೋಯಿತು. ಇನ್ನೇಕೆ ಬಂದೀತು?

# ನೀರಸ ಜೀವನ

ಅದು ನಡೆದದ್ದು ಆಗಸ್ಟ್ ತಿಂಗಳಲ್ಲಿಯ ಒಂದು ದಿವಸ. ಅಂದು ಅವನು ನಡುಮನೆಯ ಬಾಗಿಲತೆರೆದು ಪವಳಿಯಲ್ಲಿ ಕಾಲಿಟ್ಟ ಆ ವೇಳೆಯನ್ನು ಆಗ್ನೇವ್ಹನು ಈ ವರೆಗೂ ನೆನಪಿಟ್ಟಿದ್ದಾನೆ.

ಮೈಮೇಲೆ ತೆಳುವಾದ ಮಳೆಕೋಟು; ತಲೆಯ ಮೇಲೆ ಹಲಚೆ ಅಂಚಿನ ಹುಲ್ಲು ಟೊಪ್ಪಿಗೆ. ಅವನು ದಿನವೂ ಹಾಕಿಕೊಳ್ಳುವ ಟೊಪ್ಪಿಗೆ ಇದಲ್ಲ. ದಿನಾಲೂ ಈ ಟೊಪ್ಪಿಗೆಯೇ—ಅವನ ಮಂಚದ ಕೆಳಗೆ ಧೂಳ ತಿನ್ನುತ್ತ ಬಿದ್ದುಕೊಂಡೆ ಇರುತ್ತಿತ್ತು. ಆದೇಕೋ ಅಂದು ಅದನ್ನೇ ಹಾಕಿದ್ದ. ಒಂದು ಕೈಯಲ್ಲಿ ಪುಸ್ತಕಗಳ ಗಂಟು. ಇನ್ನೊಂದರಲ್ಲಿ ಅಲ್ಲಲ್ಲಿ ಗಂಟಗಂಟಾದ ಬಡಿಗೆ.

ಅವನು ಹೊರಗೆ ಬಂದ. ದಾರಿತೋರಿಸಲು ಮನೆಯ ಯಜಮಾನ, ಕ್ರುಝೇನರು ಕಂದೀಲು ಹಿಡಿದು ಹಿಂದೆ ನಿಂತಿದ್ದರು. ಅವರದು ತಿಗಳಿ ತಿಂದು ಬೋಳಾದ ತಲೆ; ಹೊಗೆ ಬಣ್ಣದ ಉದ್ದವಾದ ಗಡ್ಡ; ಮೈಮೇಲೆ ಬೆಳ್ಳ ಬಿಳಿಯ ಪೈರಣು. ನಗುತ್ತಿರುವ ಮುಖ. ಆಗಾಗ ಆಗ್ನೇವ್ಹನ ಮಾತಿಗೆ ತಲೆ ಹಾಕುತ್ತಿದ್ದರು.

"ನಮಸ್ಕಾರ! ಇನ್ನು ಬರಲೇ ?"

ಕೃಝೇಸರು ಕೈಯಲಿದ್ದ ಕಂದೀಲನ್ನು ಟೇಬಲ್ಲಿನ ಮೇಲಿಟ್ಟು ವ್ಹರಾಂಡ ದಲ್ಲಿ ಬಂದರು. ಎರಡು ಉದ್ದವಾದ ನೆರಳುಗಳು ಮೊದಲು ಪಾವಟಿಗೆಗಳ ಮೇಲೆ ಬಿದ್ದು, ಹೂವಿನ ಕುಂಡೆಗಳೆಡೆಗೆ ಸರಿದು, ನಿಂಬಿಯ ಗಿಡಗಳ ಜೊಡ್ಡಿಯ ಮೇಲೆ ಸ್ಥಿರವಾದವು.

ಮತ್ತೆ ಆಗ್ನೇವ್ಹನೇ—"ನೀವು ನನಗೆ ವಾತ್ಸಲ್ಯ ತೋರಿದಿರಿ; ಬಹಳ ಸಹಾಯ ಮಾಡಿದಿರಿ. ನಿಮ್ಮಲ್ಲಿಯ ಆತಿಥ್ಯ ನಾನು ಇಡೀ ಜನ್ಮ

ಮರೆಯುವದಿಲ್ಲ. ನಿಮ್ಮ ಸ್ವಭಾವ ಎಷ್ಟು ಒಳ್ಳೆಯದು; ನಿಮ್ಮ ಮಗಳು—ಅವಳದೂ ಎಂಥ ಗುಣ. ನೀವೆಲ್ಲ ಎಂಥ ಆನಂದ ವೃತ್ತಿಯವರು! ನಿಮ್ಮ ಹುಟ್ಟಿನಿಂದ ಬಂದ್ದ ನಿಮ್ಮ ಈ ಗುಣವನ್ನು ನಾನು ಎಷ್ಟು ವರ್ಣಿಸಲಿ? ಎಂದನು.

ಆಗ್ನೇವ್ಹನ ಹೃದಯ ಭಾವನೆಗಳಿಂದ ಭಾರವಾಗಿತ್ತು. ಆದೇ ತಾನೆ ಸ್ವಲ್ಪ ಮದ್ಯ ಪ್ರಾಶನಮಾಡಿದ್ದ; ನಸು ಅಮಲೂ ಏರಿತ್ತು. ಚರ್ಚಿನಲ್ಲಿ ಆಗಾಗ ಹಾಡುವ ಆ ಹುಡುಗನ ಧ್ವನಿಯ ಮೃದುಮಧುರತೆ ಈಗ ಇವನ ಧ್ವನಿಯಲ್ಲಿ ಬಂದಿತ್ತು. ಕುತ್ತಿಗೆ ಶಿರಗಳು ತುಂಬಿ ಬಂದಿದ್ದರಿಂದ ಮಾತು ಬರುತ್ತಿದ್ದಿಲ್ಲ; ಕಣ್ಣು ಮಿಟುಕಿಸುತ್ತಾ ಕೈಗಳನ್ನು ಕುಲುಕಿಸಿ ತನ್ನ ಭಾವವನ್ನು ವ್ಯಕ್ತಪಡಿಸುತ್ತಿದ್ದ.

ಕ್ರ್ಯುಸೋವರ ಅಂತಃಕರಣವೂ ತುಂಬಿಬಂದಿತ್ತು. ಅವರೂ ಮದ ತಕ್ಕೊಂಡಿದ್ದರು. ಸ್ವಲ್ಪ ಮುಂದೆ ಬಾಗಿ ಆಗ್ನೇವ್ಹನ ಕೈಹಿಡಿದರು. ಮತ್ತೆ ಆಗ್ನೇವ್ಹನೇ ಮಾತು ಸುರುವುಮಾಡಿದ.

"ನಿಜವಾಗಿಯೂ ನನಗೆ ನಿಮ್ಮಲ್ಲಿ ಸಲುಗೆ ಹೆಚ್ಚು ಬೆಳೆಯಿತು. ತಪ್ಪದೆ ದಿನಾಲು ನಿಮ್ಮ ಮನೆಗೆ ಬರುತ್ತಿದ್ದೆ. ಎಷ್ಟೋಸಲ ನಿಮ್ಮ ಮನೆಯ ಮದ್ಯ ಕುಡಿದೆ; ರಾತ್ರಿಗಳನ್ನು ಕಳೆದೆ. ಇವೆಲ್ಲಕ್ಕಿಂತ ಹೆಚ್ಚು ನೀವು ನನ್ನ ಕಾರ್ಯದಲ್ಲಿ ತೋರಿಸಿದ ಸಹಾನುಭೂತಿ ಸಹಕಾರ! ಎಷ್ಟು ಸಹಾಯ ಮಾಡಿದಿರಿ ನೀವು? ಆ ಉಪಕಾರ ನಾನು ಮರೆಯುವಂತಿಲ್ಲ. ನಿಮ್ಮ ಸಹಾಯವಿಲ್ಲದಿದ್ದರೆ ಅಂಕೆಗಳನ್ನು ಕಲೆಹಾಕುವ ನನ್ನ ಕೆಲಸ ಎಂದಾಗುತ್ತಿತ್ತೊ? ಎಷ್ಟು ತಿಂಗಳು ಹಿಡಿಯುತ್ತಿತ್ತೋ! ನಾನು ಬರೆದ ಪುಸ್ತಕದ ಮುನ್ನುಡಿಯಲ್ಲಿ ನಿಮ್ಮ ಉಪಕಾರ ಸ್ಮರಿಸುತ್ತೇನೆ! ನಿಮ್ಮ ಮಗಳು ವ್ಹೆರಾ ಅವಳದೂ ನನ್ನ ಮೇಲೆ ಎಷ್ಟು ಪ್ರೀತಿ! ನಾನು ಅವಳನ್ನು ಬಹಳ ಕೇಳಿದೆನೆಂದು ಹೇಳಿರಿ. ಇಗೋ ಇಲ್ಲಿಯೇ ಗೆಳೆಯರಾದ ಆ ವಕೀಲರು, ಆ ಡಾಕ್ಟರರು ಅವರನ್ನು ನಾನು ಎಂದೂ ಮರೆಯೆನೆಂದು ತಿಳಿಸಿರಿ. ಇನ್ನು ನಾವು ಕೊನೆಯದಾಗಿ ಅಪ್ಪಿಕೊಳ್ಳೋಣವೇ?"

ಭಾವನಾ ವೇಗದಿಂದ ಆಗ್ನೇವ್ಹನು ಮತ್ತೊಮ್ಮೆ ಆ ವೃದ್ಧನನ್ನು ಅಪ್ಪಿ ಸೋಪಾನಗೆಗಳನ್ನು ಇಳಿಯಹತ್ತಿದ. ಕೊನೆಯ ಮೆಟ್ಟಲು ಮೇಲೆ ನಿಂತಾಹಿಂದೆ ಹೊರಳಿ "ಇನ್ನು ಮತ್ತೆ ಭೆಟ್ಟಿ?"

" ದೇವರಿಗೇ ಗೊತ್ತು–! ಆಗಲಾರದು. "

" ಅದು ಆಗುವದು ಹಾಗೇ! ನಾವು ಪೀಟ್ಸಬರ್ಗಕ್ಕೆ ಬರುವಂತಿಲ್ಲ! ನೀನಾದರೂ ಇಲ್ಲಿ ಬರುವ ಕೆಲಸವೇನು ?

ಆಗ್ನೇವ್ಹನು ಸಸು ದೂರ ಹೋದ ಮೇಲೆ ಆ ಮುದುಕ:

" ಸುಮ್ಮನೇ ಯಾಕೆ ಹೊರುವಿ ಆ ಪುಸ್ತಕದ ಭಾರ ? ನಾಳೆ ನಾನೆ ಯಾವುದಾದರೂ ಆಳಿನ ಕೈಯಲ್ಲಿ ಕೊಟ್ಟು ಕಳಿಸುತ್ತೇನೆ "

ಅವಸರವಾಗಿ ಹೆಜ್ಜೆ ಹಾಕುತ್ತಿರುವ ಆಗ್ನೇವ್ಹಸಿಗೆ ಈ ಮಾತು ಕೇಳಿಸಲಿಲ್ಲ. ಮದ್ಯ ಕುಡಿದಿದ್ದ. ಮನಸು ಉಲ್ಹಾಸದಲ್ಲಿತ್ತು. ಕೆಲವು ದಿನ ಕೂಡಿದ್ದವರು ಈಗ ಅಗಲುವಾಗಿನ ಖೇದವು ಸ್ವಲ್ಪ ಕೂಡಿತ್ತು. ಬಾಳಿನಲ್ಲಿ ಎಷ್ಟೋ ಜನರ ಸಂಬಂಧ ಬಂದರೂ ಕೊನೆಗೆ ಉಳಿಯುವದು ಅವರ ನೆನಪಷ್ಟೇ ಎನ್ನುವ ವಿಚಾರ ಮನಸ್ಸಿನಲ್ಲಿ ತೇಲುತ್ತಿತ್ತು. ಇದು ಎಷ್ಟು ವಿಚಿತ್ರ ! ಅದೋ ಅಲ್ಲಿ ಎಂದೊ ಒಮ್ಮೆ ನೆಲ–ಮುಗಿಲು ಕೂಡುವಲ್ಲಿಂದ ಹಾರಿ ಬರುತ್ತಿರುವ ಪಕ್ಷಿಯ ಗುಂಪೊಂದು ಅರೆಕ್ಷಣ ಕಾಣಿಸಿಕೊಂಡು ರೆಕ್ಕೆಗಳ ಸಪ್ಪಳದ ರಭಸ ಕೇಳಿ, ಒಂದು ಚಣ ಅವುಗಳ ಆರ್ತನಾದವೂ ಕೇಳಬರುವದು ಉತ್ತರ ಕ್ಷಣದಲ್ಲಿ ಆ ಶಬ್ದದ ಸುಳುವೇ ಇರುವದಿಲ್ಲಾ. ಆ ಚಿತ್ರವು ಅಳಿಸಿರುತ್ತದೆ ಮನುಷ್ಯನ ಮುಖಗಳೂ, ಹೀಗೆ ಕ್ಷಣಕಾಲ ಕಣ್ಣೆದುರು ಹಾದು–ನಿಂತು, ಭೂತಕಾಲದಲ್ಲಿ ವಿಲೀನವಾಗುವದು. ಉಳಿಯುವದು ಅಸ್ಪಷ್ಟವಾದ ನೆನಪೊಂದೆ.

ವಸಂತಕಾಲದ ಮೊದಲಲ್ಲಿ, ಅವನು ಈ ತಾಲೂಕಿಗೆ ಬಂದದ್ದು, ಆಗಿನಿಂದ ಕ್ರೈಯೋನರ ಮನೆಗೆ ಬಂದು ಹೋಗಿ, ಅವರ ಮನೆಯವನಂತಾಗಿದ್ದ. ಆ ಬಂಗಲೆ, ಆ ಸೊಟ್ಟ ಸೊಟ್ಟಾದ ದಾರಿ, ವಿಶಾಲವಾದ ವರ್ಹಾಂಡ– ಹೂವಿನ ಮಕರಂದದಿಂದ ತುಂಬಿದ ಅಲ್ಲಿಯ ಗಾಳಿ ಸ್ನಾನದ ಮನೆ, ವನದ ಮನೆಯ ಮೇಲೆ ಬೀಳುವ ಆ ನೆರಳು. ಇವೆಲ್ಲ ಇಂದು ಬಾಗಿಲು ದಾಟಿದರೆ, ಮರೆಯಾಗುವವು. ಭೂತಕಾಲದ ಕಗ್ಗತ್ತಲೆಯಲ್ಲಿ ಅಡಗುವವು.

ದೊಡ್ಡ ದೊಡ್ಡ ಹೆಜ್ಜೆ ಹಾಕುತ್ತಿರುವಾಗ " ಬದುಕಿನಲ್ಲಿ ಮನುಷ್ಯನಷ್ಟು ಹೆಚ್ಚಿನ ಪ್ರಿಯವಸ್ತು ಯಾವುದು ? " ಎಂಬ ಪ್ರಶ್ನೆ ಅವನ ಮನಸ್ಸಿನಲ್ಲಿ ಮೂಡಿತು.

ಸುತ್ತೂ ಶಾಂತತೆ ನೆಲೆಸಿತ್ತು. ಹವೆಯಲ್ಲಿ ಸ್ವಲ್ಪ ಕಾವು ಕೂಡಿತ್ತು. ಹೂವುಗಳ ಸುಗಂಧದಲ್ಲಿ ತಂಬಾಕದ ಎಲೆಯ ದುರ್ವಾಸನೆ ಕೂಡಿತ್ತು. ಗಿಡಗಳ ಗುಂಪುಗಳ ನಡುವೆ ಅಲ್ಲಲ್ಲಿ ಸುಳಿ-ಸುಳಿಯಾದ ಹೊಗೆಯೊಡನೆ ಬೆಳದಿಂಗಳು ಬೆರೆತಿತ್ತು.

ಹೀಗಾಗಿ ಹೊಗೆಗೂ ಬಣ್ಣ ಬಂದಿತ್ತು. ಸುಳಿ-ಸುಳಿಯಾಗಿ ಹೋಗುತ್ತಿರುವ ಆ ಹೊಗೆಯನ್ನು ನೋಡಿದರೆ, ಇದು ಸ್ವಪ್ನ ಸೃಷ್ಟಿಯೋ ಎನ್ನುವಂತಿತ್ತು. ನೆತ್ತಿಯ ಮೇಲೆ ಚಂದ್ರನ ದಿವ್ಯ ಬೆಳಕು ತೇಲುತ್ತಿತ್ತು. ಸೃಷ್ಟಿಯೆಲ್ಲ ಅಕೋ ಆ ನೀಲವಾದ ಬಣ್ಣದಿಂದ ಇದೋ ಈ ಬಿಳಿಯ ಪಟ್ಟೆಪಟ್ಟೆಯಾದ ಬೆಳಕಿನಿಂದಲೇ ತುಂಬಿರುವದೇ ಎಂಬ ಭಾಸವಾಗುವದು. ಅಗಸ್ಟ ತಿಂಗಳಲ್ಲಿಯ ವಾತಾವರಣದಲ್ಲಿ ಇಷ್ಟು ಹೊಗೆ ಮುಸುಕಿದ್ದನ್ನು ಅವನು ಎಂದೂ ನೋಡಿರಲಿಲ್ಲ. ಇದು ಪ್ರತ್ಯಕ್ಷ ಸೃಷ್ಟಿಯಲ್ಲ; ರಂಗಭೂಮಿಯ ಮೇಲಿನ ನೋಟವಿದು ಎನ್ನುವಂತಿತ್ತು. ತೋಪಿನ ಹಿಂದೆ ಅವಿತುಕೊಂಡು ಯಾವನೋ ನೆಳಲು ಬೆಳಕಿನ ಝರಿಯನ್ನು ಬಿಡುತ್ತಿರುವನೋ ಎಂಬ ಸಂಶಯ ಬಂತು ಆಗ್ನೇವ್ಹನಿಗೆ

ಕಂಪಾವುಂಡಿನ ಹೊರಗೆ ಬಂದಾಗ ಯಾರದೋ ನೆರಳು ಸರಿದು ಇವನ ಹತ್ತಿರ ಬಂತು. "ಯಾರು? ವ್ಹೆರಾ—ನೀನು ಇಲ್ಲೇ ಇದ್ದೆಯಾ? ಹುಡುಕಿದೆ ನೀನು ಕಾಣಿಸಲಿಲ್ಲ. ಹಾಗೇ ಹೋಗಬೇಕಾಯಿತಲ್ಲಾ ಎಂದು ಅಂದುಕೊಂಡೆ! ನಾನು ಹೋಗುತ್ತೇನೆ. ನಮಸ್ಕಾರ"

"ಇಷ್ಟೇಕೆ ಅವಸರ? ಇನ್ನೂ ರಾತ್ರಿ ಬಹಳವಾಗಿಲ್ಲಾ—!"

"ಅವಸರ ಅಂದರೆ! ನಾಲ್ಕು ಮೈಲು ನಡೆಯುವದಿದೆ. ವ್ಹೆರಾ ಹೋಗಿ ಸಾಮಾನು ಕಟ್ಟಬೇಕು." ಆಗ್ನೇವ್ಹನ ಎದುರು ನಿಂತ ವ್ಹೆರಾಗೆ ಇಪ್ಪತ್ತು ವರುಷ. ಕಣ್ಣು—ಮೂಗು ಎದ್ದು ಕಾಣುತ್ತಿವೆ. ಮುಖದ ಮೇಲೆ ಉದಾಸೀನವಾದ ಕಳೆ. ಉಡುಪು ತೊಡಪುಗಳಲ್ಲಿ ಓರಣವಿಲ್ಲ. ಅದಕ್ಕೆಲ್ಲ ಇವಳಿಗೆ ವೇಳೆಯಲ್ಲಿ ತಾಳ್ಮೆಯಿಲ್ಲ. ಆದರೆ ನಿಸರ್ಗತಃ ಚೆಲುವೆಯಾದ ಹೆಣ್ಣಿಗೆ ಇವೆಲ್ಲ ಅವ್ಯವಸ್ಥಿತ ಗುಣಗಳೇ ಅವಳ ಚೆಲುವನ್ನು ಎತ್ತಿ ತೋರಿಸುವವು. ಆಗಾಗ ಆಗ್ನೇವ್ಹನಿಗೆ ಇವಳ ಸ್ಮರಣೆ ಬರುತ್ತಿತ್ತು. ಅವಳ ಆ ಟೊಂಕವನ್ನು ಮುಟ್ಟದ ಬ್ಲಾವುಜ, ಮಡಿಮುಡಿಕೆಯಾದ ಆ ಕೆಂಪು ಶಾಲುಗಳೆ ಅವನ ಕಣ್ಣು

ಕಟ್ಟುತ್ತಿತ್ತು. ಸಾಮಾನ್ಯವಾಗಿ ಅವಳ ಈ ಕೃತಿಯೇ ಇವನನ್ನು ಹೆಚ್ಚು ಉತ್ತೇಜಿಸುತ್ತಿತ್ತು.

ಕುಟ್ಟಿಮಾಡಿದಂತಿರುವ ಮೈಕಟ್ಟು, ದೊಡ್ಡ ದೊಡ್ಡ ಕಣ್ಣುಗಳು. ಉಂಗುರುಂಗುರ ಕೂದಲು. ಹೆಚ್ಚಾಗಿ ಸ್ತ್ರೀಯರನ್ನು ನೋಡದ ಇವನಿಗೆ ಅವಳೆಂದರೆ ಹುಚ್ಚು.

ಹೊರಬಾಗಿಲಿನ ಹತ್ತಿರ ನಿಂತು ಆಗ್ನೇವ್ಹನೆಂದ—

"ನಾ ಬರಲೇ ಆ? ಅಂದೂ, ಆಡಿದ್ದರೆ ಹಚ್ಚಿಕೊಳ್ಳಬೇಡಾ–ವ್ಹೆರಾ!"

ಧ್ವನಿಯಲ್ಲಿ ಆಗಿನ ಮಾಧುರ್ಯವಿತ್ತು. ಕಣ್ಣುಗಳು ಒಕಲಕ ಹೊಳೆಯುತ್ತಿದ್ದುವು.

"ನನ್ನ ತಾಯಿಗೆ ನಾನು ಇಲ್ಲಿಂದ ಹಾಕಿದ ಯಾವುದೇ ಕಾಗದದಲ್ಲಿ ನಿನ್ನ ವಿಷಯ ಬರೆಯದೇ ಹಾಕಿಲ್ಲ! ನೀವೆಲ್ಲ ಎಂಥ ಮನುಷ್ಯರು! ನೀವೆಲ್ಲ ಬಹಳ ಒಳ್ಳೆಯ ಜನ. ನಮ್ಮ ಸುತ್ತು ಇಂಥ ಜನರೇ ಇದ್ದರೆ ಮೇಲಿನ ಸ್ವರ್ಗ ಕೆಳಕ್ಕೇ ಬಂದಂತೆಯೇ!"

"ನೀವು ಇಲ್ಲಿಂದ ಹೊರಟು ಹೋಗುವದೆಲ್ಲಿಗೆ?"

"ಮೊದಲು ತಾಯಿ ಇದ್ದಲ್ಲಿ ಹೋಗುವದು. ಅಲ್ಲಿ ಹದಿನೈದು ದಿವಸ ಇದ್ದು, ಪೀಟ್ಸಬರ್ಗಕ್ಕೆ ಹೋಗುವದು. ಎಂದಿನಂತೆ ದಿನದ ದುಡಿತ—"

"ಆ ಮೇಲೆ?"

"ಈ ಚಳಿಗಾಲವೆಲ್ಲ ಅಲ್ಲಿ ಕೆಲಸಮಾಡಿ, ಮುಂದಿನ ವಸಂತದಲ್ಲಿ–ಇಲ್ಲಿಗೆ ಬಂದಂತೆ—ಮತ್ತೊಂದು ಭಾಗಕ್ಕೆ ಹೋಗೋದು. ಅಲ್ಲಿಯೂ ಇಲ್ಲಿಯಂತಹ ಕೆಲಸ ಮಾಡುವದು. ಇರಲಿ, ಮತ್ತೆ ನನ್ನ ನಿನ್ನ ಭೆಟ್ಟಿ?"

ನಸುವೇ ಬಗ್ಗಿ ಅವಳ ಕೈಗೆ ಮುದ್ದುಕೊಟ್ಟ. ತನ್ನ ಭಾವಗಳನ್ನು ಹೆಚ್ಚು ವ್ಯಕ್ತಪಡಿಸಲಿಲ್ಲ. ಮೈಮೇಲಿನ ಕೋಟು ಸಾವರಿಸಿದ. ಪುಸ್ತಕದ ಗಂಟು ಕೈಯಲ್ಲಿ ಭಾರವಾಗಿತ್ತು. ಸ್ವಲ್ಪ ಕೈ ಹಾಗೆ–ಹೀಗೆ ಮಾಡಿದ.

"ಇದೇನು? ಇಂದು ಎಷ್ಟು ಮಂಜು."

"ನೀವು ಇಲ್ಲಿ ಏನೂ ಮರೆತಿಲ್ಲವಲ್ಲಾ?"

"ಯಾವುದೂ ಇಲ್ಲ!"

ಹೀಗೆಂದು ಅಗ್ನೇಶ್ವನು ಸ್ತಬ್ಧನಾಗಿ ನಿಂತ. ಕಾಲುಗಳು ಜಡವಾದಂತೆ ಪೆಟ್ಟಿಗೆಗಳನ್ನು ಹಾಕಿದ ಹೊರಬಾಗಿಲು ದಾಟಿದ. ಅವನ ಹಿಂದೆ ಶ್ವೇರಾ—

" ನಾನೂ ಬಂದೆ— "

ಅವರಿಬ್ಬರೂ ಮುಂದೆ ನಡೆಯತೊಡಗಿದರು. ದಾರಿಯ ಅಕ್ಕಪಕ್ಕಗಳಲ್ಲಿ ಗಿಡಗಳಿಲ್ಲ. ಉದ್ದವಾದ ದಾರಿಯೇ ಕಾಣುತ್ತಿತ್ತು. ದಾರಿಯ ಆಚೆಗೆ ದೂರ ಕ್ಷಿತಿಜ. ಅಲ್ಲಿ ಮುಗಿಲು ಕೆಳಕ್ಕಿಳಿದು ಭೂಮಿಯನ್ನು ನೋಡುತ್ತಿರುವಂತೆ ಕಾಣುತ್ತಿತ್ತು. ಸೃಷ್ಟಿಯು ಪಾರದರ್ಶಕ ವಸ್ತ್ರವನ್ನು ಸುತ್ತಿಕೊಂಡಂತೆ ಮಂಜಿನ ಮಸುಕು ಕಾಣುತ್ತಿತ್ತು. ಸೃಷ್ಟಿಯು ಆ ಮಂಜಿನ ಮುಸುಕಿನಲ್ಲಿಯೇ ತನ್ನ ವೈಭವವನ್ನು ತೂರಿ ತೋರಿಸುತ್ತಿತ್ತು. ಕಲ್ಲುಗಳ ನಡುವೆ ಗಿಡಗಳ ಪೊದೆಯಲ್ಲಿ ಮಂಜು ದಟ್ಟವಾಗಿ ತುಂಬಿತ್ತು. ಒಂದೊಂದು ಕಡೆ ಮಂಜು ಸೃಷ್ಟಿಯನ್ನು ತಾನೇಕೆ ಮುಚ್ಚಲಿ ಎಂದು ದಾರಿಯ ಅಡ್ಡವಾಗಿ ಹೋಗುತ್ತಿತ್ತು. ಉದ್ದವಾದ ದಾರಿಯು ಮಗ್ಗುಲಿಗೆ ಪದರುಪದರಾದ ಕರಿಯ ಬಣ್ಣ ಪಟ್ಟಿದಂತಿತ್ತು. ಅಲ್ಲಲ್ಲಿ ಗಿಡಗಳ ತುದಿಯಲ್ಲಿ ಮಂಜು ನೇತು ಬಿದ್ದಂತೆ ಕಾಣುತ್ತಿತ್ತು.

" ಇವಳು ನನ್ನ ಕೂಡ ಬಂದಳು. ತಿರುಗಿ ಇವಳನ್ನು ಬಿಡಲು ನಾ ಹೋಗಲೇಬೇಕು " ಎಂದು ಅಗ್ನೇಶ್ವನ ಮನಸ್ಸಿನಲ್ಲಿ ಯೋಚನೆ ಬಂತು. ತನ್ನ ಕಡೆಗೇ ತಿರುಗಿದ ಅವಳ ಮುಖದ ಅರ್ಧ ಭಾಗವನ್ನು ಸ್ನೇಹಭರದಿಂದ ನೋಡುತ್ತ ಗಟ್ಟಿಯಾಗಿ ಮಾತಾಡಿದ.

" ನೋಡು—ಇಂಥ ಸುಂದರವಾದ ಹವೆಯಲ್ಲಿ ನಾವು ಈಗ ಅಗಲುವದು ನನ್ನ ಪ್ರಾಣಕ್ಕೆ ಬಂದಿದೆ. ಈ ಮಂಜು ಈ ಚಂದ್ರ—ಪ್ರಶಾಂತವಾದ ಈ ವಾತಾವರಣ ಎಲ್ಲ ಎಷ್ಟು ಅಂದವಾಗಿವೆ. ನಾನು ಮೂವತ್ತು ವರುಷ ಬದುಕಿದರೂ ಪ್ರೇಮ ಪ್ರಸಂಗ ಅನುಭವಿಸಲಿಲ್ಲ. ನನ್ನ ಆಯುಷ್ಯದಲ್ಲಿ ಪ್ರೇಮದ ಕಾವ್ಯಮಯ ಸನ್ನಿವೇಶ ಬರಲೇ ಇಲ್ಲಾ. ಪ್ರೇಮಿಗಳ ವಿಷಯ ಕೇಳಿಯೇ ಗೊತ್ತು ನನಗೆ. ಇದು ಆಶ್ಚರ್ಯ ! ಶಹರದಲ್ಲಿದ್ದಾಗ ಈ ಕೊರತೆ ಕಾಣಿಸದು ನನಗೆ ಇಂಥಲ್ಲಿ ಈ ಸೃಷ್ಟಿಸೌಂದರ್ಯದ ನಿಧಿಯಲ್ಲಿ ಬಂದಾಗ ಆ ಕೊರತೆ ಕಾಣಿಸುವದು. "

" ಈ ಕೊರತೆ ಹಾಗೆ ಉಳಿದದ್ದು—ಯಾಕೆ ? "

"ನನಗೆನಿಸುವದು; ಪ್ರೇಮ ಮಾಡಲಿಕ್ಕೆ ನನಗೆ ವೇಳೆಯೇ ಸಿಗಲಿಲ್ಲವೋ ಏನೋ? ಯಾವಾಗಲೂ ಒಬ್ಬಂಟಿಗನಾಗಿರುವ- ನನ್ನ ಸ್ವಭಾವ ಅದಕ್ಕೆ ಕಾರಣವಿದ್ದೀತು."

ಆಮೇಲೆ ಎಷ್ಟೋ ಹೊತ್ತಿನ ವರೆಗೆ ಇಬ್ಬರೂ ನೀರವ. ಹಾಗೆ ನಡೆಯುತ್ತಿದ್ದಾರೆ. ಅಗ್ನೇವ್ಹನು ಹ್ವೀರಾಳ ತುಂಬಿ ಪುಸ್ತಕದ ಕಡೆಗೊಮ್ಮೆ, ಅವಳು ಹೊದ್ದುಕೊಂಡು ಶಾಲಿನ ಕಡೆಗೊಮ್ಮೆ ನೋಡುತ್ತಾನೆ. ಹೀಗೆ ನೋಡುತ್ತಿರುವಾಗ ತಾನು ಅಲ್ಲಿ ಕಳೆದ ಬಿಸಿಲು ಹಾಗೂ ವಸಂತಕಾಲದ ದಿನಗಳೇ ಸ್ಮರಣಕ್ಕೆ ಬರುತ್ತಿವೆ.

ಪೀಟ್ಸಬರ್ಗದಿಂದ ಎಷ್ಟೋ ದೂರ ಇರುವ ಈ ಹಳ್ಳಿಗೆ ಬಂದು ತನ್ನ ಕೆಲಸದಲ್ಲಿ ಈ ಹಳ್ಳಿಪಾಡಿನ ಸರಳ ಸ್ವಭಾವದ ಜನರೊಡನೆ ತಾನು ಕಳೆದ ದಿನಗಳು, ಇವನಿಗೆ ಗೊತ್ತಾಗದೇ ಉರುಳಿ ಹೋದವು. ಈ ಜನರೊಡನೆ ಅವನು ಬಹಳ ಸಮರಸನಾಗಿದ್ದ. ದಿನದಿನವೂ ಆಕಾಶದಲ್ಲಿ ಸಂಜೆ ಮುಂಜಾನೆ ಬಣ್ಣಗಳ ಸಂತೆಯೇ ನೆರೆದು, ಒಂದರ ಹಿಂದೊಂದು ಸೂರ್ಯೋದಯ-ಸೂರ್ಯಾಸ್ತಗಳು ಸಾಗಿದ್ದವು. ಬೇಸಿಗೆಯು ಜಾರಿ ಮಳೆಗಾಲ ಮೋರೆ ಚಾಚಿತ್ತು; ಬೇಸಿಗೆಯ ರಾತ್ರಿಯಲ್ಲಿ ಕೇಳುವ ಪಕ್ಷಿಗಳ ಧ್ವನಿ ಈಗ ಕೇಳುವದಿಲ್ಲ. ದಿನಗಳೇನೋ ಹೀಗೆ ಹೋಗುತ್ತಿವೆ. ಅಗ್ನೇವ್ಹನಿಗೆ ಇವರ ಎಚ್ಚರವಿಲ್ಲ. ಯಾವಾಗಲೂ ಇವನ ಹೃದಯ ತುಂಬಿ ಇರುತ್ತಿತ್ತು. ಬರುವಾಗ ಜಕ ಜಕ ಜರಿಕೆಯಿಂದ ಬಂದಿದ್ದ; ಇಲ್ಲಿಯ ಸ್ಥಿತಿಗತಿಗಳ ಬಗ್ಗೆ ಉದಾಸೀನಭಾವ ತಾಳಿದ್ದ; ಇಲ್ಲಿಯದು ಅನಾಗರಿಕ ಜನ; ತನ್ನ ಕೆಲಸದ ಅರಿವು ಇವರಿಗಿಲ್ಲ; ಎಂದುಕೊಂಡಿದ್ದ; ಮೊದಲು ಆ ತಾಲೂಕಿನ ಮುಖ್ಯ ಸ್ಥಳಕ್ಕೆ ಬಂದು ಕ್ರುಝೋನರ ಇರುವು ಗೊತ್ತುಹಚ್ಚಿದ. ಮೂರು ಮೈಲು ಕಾಲಿನಿಂದ ನಡೆದು ಈ ಹಳ್ಳಿಗೆ ಬಂದು ನೋಡುತ್ತಾನೆ. ಊರ ಸುತ್ತಾ ಹಸಿರು ಹುಲ್ಲು ಅಲ್ಲಲ್ಲಿ ಪೊದೆಗಳು. ಅಲ್ಲೊಂದು ಇಲ್ಲೊಂದು ಹಸಿರು ಮುರಿಯುವ ಗಿಡಗಳು. ಬೆಳ್ಳಕ್ಕಿಗಳು ಬೀಸಾಗಿ ಬೀಸಿ ದಿಗಂತದಲ್ಲಿ ಹಾರುತ್ತಿದ್ದವು. ಜಿಟ್ಟೆಗಳ ಹಾರಾಟ ಸಾಗಿತ್ತು.

ಕ್ರುಝೋನನು ತಾನು ಕಲ್ಪನೆ ಮಾಡಿದಕ್ಕಿಂತ ಒಂದು ತೂಕ ಹೆಚ್ಚು ಆದರವಾಯಿತು. ಅವರೆಲ್ಲ ಇವನ ಕೆಲಸದಲ್ಲಿ ಪ್ರೀತಿ ತೋರಿಸಿದರು. ಅಂದು

ರಾತ್ರಿ ಅಲ್ಲಿಯೇ ಕಳೆದ. ಆಮೇಲೆ ಅಲ್ಲಿಯ ಜನರೊಡನೆ ಪ್ರಾದೇಶಿಕ ಮಹತ್ವದ ಸ್ಥಾನಗಳನ್ನು ನೋಡಲು ಆಗಾಗ ಹೋಗುತ್ತಿದ್ದ.

ವ್ಹೇರಾಳೊಡನೆ ಹೋಗುತ್ತಿರುವಾಗ ಇವೆಲ್ಲ ಇವನ ಸ್ಮರಣಕೆ ಕ ಬರುತ್ತಿದ್ದವು.

"ಒಂದೇ ಎರಡೆ ಇಲ್ಲಿಯ ವಿಷಯ ? ಕೂಡಿಸಿ ಬರೆದರೆ ಒಂದು ಗ್ರಂಥ ವಾದೀತು! ಗ್ರಂಥಕ್ಕೆ ದುಡ್ಡೂ ಸಿಕ್ಕೀತು. ಬುದ್ಧಿವಂತರೂ ಕವಿಗಳೂ ಪೀಟ್ಸ್‌ಬರ್ಗಕ್ಕೆ ಯಾಕೆ ಹೋಗುವರೋ ಸಾಯಲಿಕ್ಕೆ! ಅಂಥವರು ಅಲ್ಲಿರು ವದು ಮೂರ್ಖತನದ ಪರಮಾವಧಿಯೇ ಸರಿ!"

ರಸ್ತೆ ಕವಲೊಡೆಯುವಲ್ಲಿ ಅವರು ಬಂದರು, ಇಲ್ಲಿ ಒಂದು ಪೂಲು. ಆತಿಥಿಗಳೊಂದಿಗೆ ಕ್ರುರ್ಝೋನರು ತಿರುಗಾಡಲಿಕ್ಕೆ ಬಂದರೆ, ಇಲ್ಲಿ ಸ್ವಲ್ಪ ಕೂಡುವದು ರೂಢಿ.

"ಪೂಲು ಬಂತು. ನೀನು ತಿರುಗು ವ್ಹೇರಾ—!"

ವ್ಹೇರಾ ನಿಂತಳು. ಸಿಟ್ಟುಸಿರಟ್ಟಂತೆ ಮಾಡಿ—

"ಇಲ್ಲಿ ನಾವೂ ಸ್ವಲ್ಪ ಕೂಡೋಣ."

ಆಗ್ನೇವ್ಹನು ಪುಸ್ತಕಗಳ ಭಾರವನ್ನು ಕೆಳಗಿರಿಸಿ ಕುಳಿತ. ವ್ಹೇರಾಗೂ ತೇಕುಹತ್ತಿತ್ತು. ದೃಷ್ಟಿಯು ಆಗ್ನೇವ್ಹನ ಕಡೆಗಿರಲಿಲ್ಲ. ದೂರ ಎಲ್ಲಿಯೋ ಇತ್ತು. ಅವಳ ಮುಖ ಇವನಿಗೆ ನೆಟ್ಟಗೆ ಕಾಣುತ್ತಿರಲಿಲ್ಲ.

"ಇನ್ನು ಹತ್ತು ವರುಷಗಳ ಮೇಲೆ ನನ್ನ ನಿನ್ನ ಭೆಟ್ಟಿಯಾಯಿತೆಂದು ತಿಳಿ. ಆಗ ಎಷ್ಟು ವಿಚಿತ್ರ ಕಂಡೀತು. ನಾಲ್ಕಾರು ಮಕ್ಕಳ ತಾಯಾದ ನೀನು. ನಿರುಪಯೋಗಿಯಾದ ನಾಲ್ಕು ಗ್ರಂಥಗಳನ್ನು ಬರೆದ ನಾನು. ಆಗ ಇಂದಿನ ಈ ಅನುಭವದ ಮಾತು ನೆನೆಸೇವು. ಇಲ್ಲಿ ಕಳೆದ ದಿನಗಳ ಮಾತೂ ತೆಗೆದೆವು, ಆದರೆ ಇಂದಿನ ಅನುಭವ ಎಷ್ಟು ಸ್ಪಷ್ಟವಿದೆ? ಈ ಸುಖ ಆಗ ಹೇಗೆ ಬಂದೀತು! ಈ ದಿವಸದ ತಾರೀಖು ತಿಂಗಳಾದರೂ ನೆನಪಾಗುವದೋ ಇಲ್ಲವೊ?"

ವ್ಹೇರಾ ಬೆಚ್ಚಿಬಿದ್ದಳು. ಅವನ ಕಡೆಗೆ ತಿರುಗಿ—

"ಆ?"

"ನಾನು ಏನು ಕೇಳಿದೆ ಹೇಳು. ನಿನ್ನ"

" ನಿಮ್ಮ ಯಾವ ಮಾತೂ ನಾನು ಕೇಳಿಲ್ಲ. "

ಈಗ ವ್ಹೇರಾಳ ಮುಖ ಬಿಳುಪೇರಿತ್ತು. ಅಗ್ನೀವ್ಹನಿಗೆ ಇದು ಗೊತ್ತಾಯಿತು. ತೇಕು ಹತ್ತಿದವಳಂತೆ ತೇಕುತಿದ್ದಳು. ತುಟಿಗಳು ಅದರುತ್ತಿದ್ದವು. ಹಣೆಯ ಮೇಲೆ ಕೂದಲಿನ ಎರಡು ಎಸಳುಗಳು ಜೋಲು ಬಿದ್ದಿದ್ದವು. ಅವನ ದೃಷ್ಟಿಯೊಡನೆ ತನ್ನದನ್ನು ಕೂಡಿಸುವ ಧೈರ್ಯವಾಗಲಿಲ್ಲ–ವ್ಹೇರಾಗೆ ಅಗ್ನೀವ್ಹನೇ—

" ನೀನು ಮಾತಾಡುವದಿಲ್ಲ. ನನ್ನ ಮೇಲೆ ನೀನು ಸಿಟ್ಟಾಗಿರುವಿ. "

ವ್ಹೇರಾ ಪಕ್ಕದಲ್ಲಿ ಕುಳಿತ ಅಗ್ನೀವ್ಹನ ಭುಜಕ್ಕೆ ಅತುಕೊಂಡಂತೆ ಮಾಡಿ ಮತ್ತೆ ಸರಿಯಾಗಿ ಕುಳಿತಳು. ಅನಿರ್ವಚನೀಯವಾದ ದುಃಖದಿಂದ ಮುಖವು ಇಳಿದು ಹೋಗಿತ್ತು. ಮೆಲುದನಿಯಿಂದ—

" ಈ ಸ್ಥಿತಿ ಎಂಥ ಕಠಿಣ. "

ತನಗಾದ ಆಶ್ಚರ್ಯವನ್ನು ಮೇಲೆ ತೋರಿಸದೇ ಇರಲಾರದೇ—

" ಕಠಿಣ ಏನು? ಎಂಥ ಕಷ್ಟ? "

ಬಹು ಕಷ್ಟದಿಂದ ನಿಟ್ಟುಸಿರುಬಿಡುತ್ತಾ, ವ್ಹೇರಾ ಅಗ್ನೀವ್ಹನ ಕಡೆಗೆ ತಿರುಗಿ; ನಸು ಆಕಾಶದ ಕಡೆಗೆ ನೋಡಿ

" ಒಂದು ಮಾತು ಹೇಳಲೇ ನಿಮಗೆ–ನಾನು? "

" ಹೇಳು! ಅಂಥ ಯಾವ ಮಾತು ನೀನು ಹೇಳುವದು! "

" ನೋಡಿರೀ–ಅದು ನಿಮಗೆ ಚಮತ್ಕಾರ ಕಂಡಿತು? "

ಕೇಳಲು ಸಿದ್ಧನಾದವನಂತೆ ಅಗ್ನೀವ್ಹ ಕುಳಿತ. ನೆಲದ ಕಡೆಗೆ ನೋಡುತ್ತಾ ಚಿಗುರು ಚಿರೂಟುಗಳಿಂದ ಶಾಲಿನ ಗೊಂಡೆಗಳ ಕೂಡ ಆಡುತ್ತ ವ್ಹೇರಾ—

" ನಾನು ಹೇಳುವ ಮಾತು ಕೇಳಿ, ನೀವು ನನಗೆ ಹುಚ್ಚಿ ಎಂದೀರಿ? ನಾನಂತೂ ಹೇಳಲು ಗಟ್ಟಿ ಮನಸ್ಸು ಮಾಡಿದ್ದೇನೆ. "

ಅವಳ ಮಾತುಗಳು ಅಸ್ಪಷ್ಟವಾದವು ಹೇಳುವದೆಲ್ಲಿಯೋ ಉಳಿದು, ಅಳಲಿಕ್ಕೆ ಹತ್ತಿದಳು ವ್ಹೇರಾ. ಅಗ್ನೀವ್ಹನ ಅವಸ್ಥೆ ತಗುಬಗೆಯಾಯಿತು. ಇವನ ಗಂಟಲೂ ಕಟ್ಟಿಕೊಂಡಿತು. ಏನು ಮಾತಾಡಬೇಕೋ ತಿಳಿಯದವನಾಗಿ ಬೆಕ್ಕಸದಿಂದ ಅಚೆ ಈಚೆ ನೋಡತೊಡಗಿದನು. ಎಂದೂ ಯಾವ

ಹೆಂಣು ಕಂಣೀರು ಹಾಕಿದ್ದನ್ನು ನೋಡಿದ ಇವನ ಕಣ್ಣುಗಳು ಈಗ ಒದ್ದೆಯಾದವು.

ಇಂತಹ ವಿಲಕ್ಷಣ ಅವಸ್ಥೆಯಲ್ಲಿಯೇ—

"ನೋಡು ವ್ಹೇರಾ, ನೀನು ಈಗ ಅಳುವದೇಕೆ? ಯಾರಾದರೂ ಅಡಿದರೇ? ನೀನು ಬಾಯಿಬಿಟ್ಟು ಹೇಳದೆ, ನನಗೆ ತಿಳಿಯುವದೆಂತು?"

ಅವಳನ್ನು ಸಮಾಧಾನಮಾಡುತ್ತ ಧೈರ್ಯತಂದುಕೊಂಡು ಮೋರೆಯನ್ನು ಮುಸುಕಿದ ಅವಳ ಕೈಯನ್ನು ಬಿಡಿಸಿ, ಮುಖದ ಸೆರೆ ಬಿಡಿಸಿದ. ಈಗ ವ್ಹೇರಾಳ ಕಣ್ಣುಗಳಲ್ಲಿ ನಗೆ ಮಿಂಚು-ಮಿಂಚಿತು. "ನಿನ್ನನ್ನು ನಾನು ಪ್ರೀತಿಸುವೆನು"

ಸುಲಭವಾದ ಈ ಶಬ್ದಗಳನ್ನು ಕೇಳಿದ ಕೂಡಲೇ ಆಗ್ನೇವ್ಹನು ಗಡಿ ಬಿಡಿಯಲ್ಲಿ ಬಿದ್ದವನಾದ. ಮೋರೆಯನ್ನು ಆಚೆಗೆ ಮಾಡಿ ನಿಂತ. ಆಶ್ಚರ್ಯ ವಷ್ಟೇ ಅಲ್ಲ ಆಗ್ನೇವ್ಹನಿಗೆ ಭಯವೂ ಉಂಟಾಯಿತು.

ಈ ವರೆಗಿನ ಉಲ್ಹಸಿತ ವೃತ್ತಿಯು ಎಲ್ಲಿಯೋ ಹೋಯಿತು. ಹಗುರಾದ ಕರುಣಪೂರಿತ ಭಾವನೆಗಳೇ ತುಂಬಿದ್ದ ಇವನ ಮನಸ್ಸಿನಲ್ಲಿ ವಿಕೃತ ಭಾವಗಳೇ ಈಗ ಎದ್ದುವು. ಹೆಣ್ಣಿಗೆ ಬೆಲೆ ತರುವ ಕಾತರ ಭಾವವನ್ನು ಬಲ್ಲ; ತನ್ನ ಪ್ರೇಮವನ್ನು ಬಾಯಿಯಿಂದ ಆಡಿ ತೋರಿಸಿದಳಲ್ಲಾ ಇಂದು ಇವಳು, ಎಂದು ಅಸಹ್ಯಪಟ್ಟ. ತಾನು ಇವಳನ್ನು ಪ್ರೀತಿಸುವೆನೇ ಎಂದು ತನ್ನೊಳಗೆ ಎಣಿಕೆ ಹಾಕಿದ.

ಈ ವರೆಗೂ ಯಾವ ಮಾತು ಒಳಗೇ ಹುದುಗಿಕೊಂಡು ಗೋಳಾಡಿಸುತ್ತಿತ್ತೋ ಅದನ್ನು ಹೊರಗೆ ಹಾಕಿದ್ದರಿಂದ ವ್ಹೇರಾ ಈಗ ಸುಖಿ! ಮನಸ್ಸು ಹಗುರಾಗಿತ್ತು.

ಆಗ್ನೇವ್ಹನ ಅವಸ್ಥೆ ಭೀತಿಯಲ್ಲಿ ಗ್ರಸ್ತನಾದವನಂತಾಗಿತ್ತು. ವ್ಹೇರಾ ಏನೇನೋ ಹೇಳಿದಳು. ಯಾವುದೂ ಇವನಿಗೆ ನೆನಪಿಲ್ಲ. ಹೃದಯಕ್ಕಾದ ಆಘಾತವಷ್ಟೇ ಆವನಿಗೆ ಗೊತ್ತು. ಗಂಟಲು ಕಟ್ಟಿಕೊಂಡದ್ದರಿಂದ ಆವಳ ಮಾತುಗಳೂ ಅಸ್ಪಷ್ಟವಾಗಿದ್ದವು. ಆದರೂ ಒಂದು ದಿವ್ಯ ಸಂಗೀತ ಕೇಳಿದಷ್ಟು

ಆನಂದ ಇವನಿಗಾಗುತ್ತಿತ್ತು. ಒಮ್ಮೆ ಅಳು; ಮತ್ತೊಮ್ಮೆ ನಗು; ರೆಪ್ಪೆಗಳ ಮೇಲೆ ಹನಿಗಳು ಹಾಗೇ ನಿಂತಿವೆ, ತನ್ನ ಮಾತನ್ನು ಹಾಗೇ ಮುಂದು ವರಿಸಿದ್ದಾಳೆ; ಅವನ ಗುಣಗಳು ತನ್ನನ್ನು ಹೇಗೆ ಸೆಳೆದವು; ಅವನು ಕೈಕೊಂಡ ಕಾರ್ಯ ಇವಳಿಗೆಷ್ಟು ಅಭಿಮಾನ ತರುತ್ತಿತ್ತು ಎಂದು ಮುಂತಾದ ಮಾತುಗಳನ್ನು ಅವಳು ಹೇಳುತ್ತಿದ್ದಳು. ಅವನ ಒಂದು ಶಬ್ದ ತನ್ನನ್ನು ಭವಿಷ್ಯ ಲೋಕಕ್ಕೇ ಒಯ್ಯುತ್ತಿತ್ತೆಂದು ಹೇಳಿದಳು.

ಸೃಷ್ಟಿಯೂ ಆಗ ನಿಶ್ಶಬ್ದವಾಗಿತ್ತು. ಗಿಡಗಳು ಪೊದೆಗಳು ಇವಳ ಮಾತು ಕೇಳಲು ಇಷ್ಟು ಸ್ತಬ್ಧವಾಗಿ ನಿಂತಿರುವವೊ ಎನ್ನುವಂತಿತ್ತು !

ಇತ್ತ ಆಗ್ನೇಸನ ಹೃದಯದಲ್ಲಿ ಮಾತ್ರ, ಯಾವುದೊ ಅನಿರ್ವಚನೀಯ ದುಃಖದ ಆವೇಗ ತಲೆಯೆತ್ತುತಿತ್ತು.

ಅಂತಃಕರಣದಲ್ಲಿಯ ಪ್ರೇಮವನ್ನು ಹೊರಗೆ ಮಾತಾಡಿ ತೋರಿಸುವಾಗ, ವ್ಹೇರಾಳು ಈಗ ಹೆಚ್ಚು ಹೆಚ್ಚು ಚೆಲುವೆಯಾಗಿ ಕಾಣುತ್ತಿದ್ದಳು. ಅವಳ ಮಾತಿನಲ್ಲಿ ಆವೇಶ ಉಕ್ಕುತ್ತಿತ್ತು, ಇದನ್ನೇ ಕೇಳುತ್ತ ತಾನು ಹಾಗೇ ನಿಂತು ಕೊಂಡರೆ ಎಷ್ಟು ಸುಖ ! ಎಂಥ ಹಿತವಾದೀತೆಂಬ ವಿಚಾರ ತಲೆಯಲ್ಲಿ ಇಣಿಕಿ ಹಾಕಿದರೂ, ಅದೇನು ಕಾರಣವೊ, ಇವನು ಕೊಡ್ಡನಾಗಿಯೇ ಉಳಿದ. ಸ್ಥಿತಿ ಹೀಗಿದ್ದರೂ ವ್ಹೇರಾಳ ಬಗ್ಗೆ ಇವನಿಗೇನೋ ಅನುಕಂಪ ಹುಟ್ಟಿತು. ಇಷ್ಟು ಒಳ್ಳೆಯ ಹುಡುಗಿ ತನಗಾಗಿ ಎಷ್ಟು ಜೀವ ಹಿಂಡಿಕೊಂಡಿದ್ದಳಲ್ಲಾ ಎಂದು ಮರುಕಬಟ್ಟು, ಒದ್ದಾಡಿದ. ಸಾಧಾರಣವಾಗಿ ಹೆಚ್ಚು ಓದುವ ಸ್ವಭಾವವಿದ್ದು, ಕೇವಲ ಸಿದ್ಧಾಂತದ ಕಡೆಗೇ ನೇರವಾದ ದೃಷ್ಟಿ ಇತ್ತೆಂದೋ— ಅಥವಾ ಇನ್ನೊಬ್ಬರ ದುಃಖದಲ್ಲಿ ಸಮರಸವಾಗುವದಕ್ಕಿಂತ ದೂರದಿಂದಲೇ ಅದರ ಸ್ಥಿತಿಗತಿಗಳನ್ನರಿಯುವ ಚಟ ಹತ್ತಿದವರಿಗೆ, ಆಯುಷ್ಯದಲ್ಲಿಯ ತೀವ್ರತೆಯು, ಕಡಿಮೆಯಾಗುವಂತೆ, ಇವನ ಅವಸ್ಥೆಯಾಗಿತ್ತೆಂದೋ ಏನೋ, ವ್ಹೇರಾಳ ಮಾತಿನಲ್ಲಿಯ ಗೆಲುವು, ತಾರುಣ್ಯ, ಈ ಪ್ರಾಣಿಗೆ ಸುಳ್ಳಾಗಿಯೇ ಕಂಡವು. ಮನಸ್ಸಿನ ಇನ್ನೊಂದು ಬದಿಗೆ ಇದರ ವಿರುದ್ಧವಾದ ವಿಚಾರಗಳ ಬಿರುಗಾಳಿಯೇ ಏಳುತ್ತಿತ್ತು. ಸೌಂದರ್ಯ ಸೃಷ್ಟಿಯಲ್ಲಿಯ ಈ ವೈಭವದ ಅನುಭೂತಿಯು, ಎಷ್ಟು ಗ್ರಂಥಗಳನ್ನು ತಾನೆ ಆಕಲನಮಾಡಿದರೆ, ವಿದಿತ ವಾದೀತೆನ್ನುವ ವಿಚಾರ ಒಂದೇಸವನೇ ಗುಡುಗುತ್ತಿತ್ತು. ತನ್ನನ್ನು ತಾನು

ಹಳಿದುಕೊಂಡ. ಆದರೆ, ತಾನು ತಪ್ಪುವದು ಎಲ್ಲಿ ಎನ್ನುವದೇ ಇವನಿಗೆ ತಿಳಿಯಬೊಲ್ಲದು.

ಈಗ ಮಾತು ಆವಶ್ಯವಿತ್ತು. ಆದರೆ ಇವನ ಬಾಯಿಗೆ ಬೀಗಹಾಕಿದಂತಿತ್ತು. ಏನು ಆಡಬೇಕೆನ್ನುವದೇ ಇವನಿಗೆ ಹೊಳೆಯಲೊಲ್ಲದು. "ನನ್ನ ಪ್ರೀತಿ ನಿನ್ನ ಮೇಲೆ ಇಲ್ಲಾ–" ಎಂದು ಧೈರ್ಯದಿಂದ ಹಾರಿಸಿಕೊಳ್ಳುವದೂ ಇವನಿಂದ ಆಗಲೊಲ್ಲದು. "ಹೌದು ನಾನೂ ನಿನ್ನನ್ನು ಪ್ರೀತಿಸುವೆ" ಎಂದೂ ಹೇಳುವಂತೆಯೂ ಇಲ್ಲ. ಅದು ಹೇಗೆಂದರೆ ತನ್ನ ಹೃದಯವನ್ನು ಎಷ್ಟು ಬೆದಕಿದರೂ—ಅಲ್ಲಿ ವ್ಹೀರಾಳ ಬಗ್ಗೆ ಪ್ರೀತಿ ಸಿಕ್ಕಲೊಲ್ಲದು.

ಅವನು ಸ್ಥಬ್ಧನಾಗಿಯೇ ಉಳಿದ.

ವ್ಹೀರಾಳ ಮಾತು ಸಾಗಿಯೇ ಇತ್ತು. ಕಣ್ಣು ತುಂಬ ಇವನನ್ನು ನೋಡುವದಕ್ಕಿಂತ ಅವಳಿಗೆ, ಬೇರೆ ಸುಖವಿಲ್ಲ; ಅವನು ಎಲ್ಲಿ ಬಾ ಅನ್ನುವನೊ ಅಲ್ಲಿಗೆ ಅವಳು ಹೋಗಲು ಸಿದ್ಧ; ಧರ್ಮಪತ್ನಿಯಾಗಿ ಅವನೊಡನೆ ಆಯುಷ್ಯ ಕಳೆಯುವದೇ ಅವಳಿಗೆ ಉಳಿದದ್ದು; ಅದಾಗದಿದ್ದರೆ ಆತ್ಮಹತ್ಯೆಯೊಂದೇ ಅವಳಿಗೆ ದಾರಿ ಎಂದು ಮುಂತಾಗಿ ಅವಳು ತನ್ನ ಅಳಲು ತೋಡಿಕೊಳ್ಳುತ್ತಿದ್ದಳು.

ಎರಡೂ ಕೈಗಳನ್ನು ಒಂದರಲ್ಲೊಂದು ಸಿಕ್ಕಿಸಿಕೊಂಡು—ದೀನ ಮುದ್ರೆಯಿಂದ ಅವಳು ಮಾತು ಮುಂದುವರಿಸಿದಳು. ನೀನು ಹೋದ ಮೇಲೆ ನನ್ನದೆಂಬುದು ಇಲ್ಲಿ ಯಾವುದೂ ಇಲ್ಲ; ಇಲ್ಲಿಯ ಹವೆ, ಈ ಮರುಭೂಮಿ–ಎಲ್ಲವೂ ನನಗೆ ಬೇಜಾರು. ಇವುಗಳಿಂದ ನಾನು, ಹೇಗೆ ದೂರವಾದೇನೆಂಬ ಆತುರ ಹೆಚ್ಚಾಗಿದೆ ಇಲ್ಲಿಯ ಜನ ಒಳ್ಳೇದು ನಿಜ; ಆದರೆ, ನಾವೀನ್ಯವಿಲ್ಲದ್ದು! ಅಲ್ಲಿ ನಿನ್ನೊಡನೆ ಅದಾವುದೋ ಒಂದು ಎಡೆಯಲ್ಲಿ ಹೊಸ ಜನರೊಡನೆ ಸಂಸಾರ ಹೂಡುವದು ನನಗೆ ಬಹಳ ಸೇರುತ್ತದೆ.

ಇವಳು ಏನೋ ಮಾತಾಡುತ್ತಿದ್ದಾಳೆ, ಏನು ಮಾತ್ಸೋ ಇದು–ಎಂದು ಅಗ್ನೇವ್ಹನು ಯೋಚಿಸಿದ! ಅವಳ ಮಾತನ್ನು ಕೇಳುತ್ತ ಕೂಡುವಷ್ಟು ತಾಳ್ಮೆ ಅವನಿಗಿಲ್ಲ.

"ನೋಡು ವ್ಹೀರಾ, ನೀನು ನನ್ನ ಮೇಲೆ ಉಪಕಾರದ ಭಾರವನ್ನು

ಹೊರಿಸಿದೆ. ನಿನ್ನ ಪ್ರೀತಿಗೆ ಪಾತ್ರನಾಗುವಷ್ಟು, ನನ್ನಲ್ಲಿ ಗುಣಗಳಿಲ್ಲ; ನಾನು ನಿನ್ನನ್ನು ಮೋಸಪಡಿಸುವದಿಲ್ಲ; ಇಬ್ಬರೂ ಒಂದುಗೂಡಲಿಕ್ಕೆ ಉಭಯತರಲ್ಲೂ ಸರಿಸಮಾನವಾದ ಗುಣಗಳಿರಬೇಕು; ಅದರ ಅರ್ಥ—, ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸಬೇಕು. ”

ಅಡೆತಡೆ ಇಲ್ಲದೆ ಮಾತಾಡುವಷ್ಟು ಕಠಿಣನಾದೆನಲ್ಲ ಎಂದು ಆಗ್ನೇವ್ಹನಿಗೆ ನಾಚಿಕೆಯಾಯಿತು. ತಾನಾಡಿದ ಮಾತು ವ್ಹೇರಾಳಿಗೆ ಬರಿಯ ಖೂಟಾಟಿಕೆ ಯಂತೆ ಕಂಡಿರಬೇಕೆಂದು ಭಾವಿಸಿದ.

ಇವನ ಮನಸ್ಸಿನಲ್ಲಿಯ ವಿಚಾರಗಳು ವ್ಹೇರಾಳಿಗೂ ತಿಳಿದಿರಬೇಕು. ಯಾಕಂದರೆ, ಅವಳ ಮುಖ ಈಗ ಬಿಳುಪೇರಿತ್ತು; ದೃಷ್ಟಿ ಅಧೋಮುಖ ವಾಗಿತ್ತು.

ಈ ಸ್ತಬ್ಧತೆಯನ್ನು ಆಗ್ನೇವ್ಹನೇ ಭೇದಿಸಿದ.

“ ನಾನು ನಿನ್ನನ್ನು ಆದರದಿಂದ ಕಾಣುತ್ತ ಬಂದಿದ್ದೇನೆ. ಈಗ ನೀನು ನನ್ನ ಮೇಲೆ ಕೋಪಿಸಿದರೆ, ನಾನು ಹೆಚ್ಚಿನ ದುಃಖಿಯಾದೇನು ? ”

ವ್ಹೇರಾ ಚಟ್ಟನೇ ಎದ್ದು ನಿಂತಳು; ಮನೆಗೆ ಹೋಗಲು ಸಿದ್ಧಳಾದಳು; ಆಗ್ನೇವ್ಹನು ಅವಳ ಬೆನ್ನು ಹಿಂದಿಯೇ ಹೋಗಹತ್ತಿದ.

ಕೈ ಸನ್ನೆ ಯಿಂದ . “ ಮತ್ತೇಕೆ ತಿರುಗಿ ಬರುವಿರಿ ? ನಾನೊಬ್ಬಳೇ ಹೋಗುತ್ತೇನೆ. ” ಎಂದಳು ವ್ಹೇರಾ.

“ ಮನೆಯ ವರೆಗೆ ಬರಲೇಬೇಕು ನಾನು ” ಮುಖದಿಂದ ಎಷ್ಟೋ ಶಬ್ದಗಳು ಹೊರಡುತ್ತಿದ್ದರೂ, ಪ್ರತಿಯೊಂದು ಶಬ್ದವೂ ವ್ಯರ್ಥವೇ ಎನ್ನುವ ತಿರಸ್ಕಾರ ಭಾವ ಆಗ್ನೇವ್ಹನಿಗೆ ಉಂಟಾಗುತ್ತಿತ್ತು. ಯಾವುದೋ ಮಹಾ ಅಪರಾಧ ಮಾಡಿದೆನೆಂದು ಇವನ ಮನಸ್ಸೇ ಇವನನ್ನು ತಿನ್ನುತ್ತಿತ್ತು. ಇಷ್ಟೇಕೆ ತಾನು-ಸ್ತ್ರೀ ಪ್ರೇಮಕ್ಕೆ ವಿಮುಖನಾದದ್ದೆಂದು ಹುಡುಕಲು ಹೃದಯವನ್ನೆ ತಲೆಕೆಳಗೆ ಮಾಡಿದ. ಕಾರಣ ತಿಳಿಯಲೊಲ್ಲದು; ಅಂದ ಮೇಲೆ ಇವನ ಮನಸ್ಸು ತೊಳಲಾಡುವದೇ ಸರಿ ! ಹೃದಯದಲ್ಲಿ ಶೃಂಗಾರ ಭಾವದ ತರಲ ತೆರೆಗಳು ಈಗಾದರೂ ಏಳಲೆಂದು ವ್ಹೇರಾಳ ದುಂಡಾದ ಮುಖ; ತುಂಬಿದ ಕುತ್ತಿಗೆಗೆ, ಆತು ಜೋತಾಡುವ ಆ ಭಾರವಾದ ಮೋಹಕ ಮುಡಿ; ಧೂಳವನ್ನು

ಕದಡುತ್ತಿರುವ ಪುಟ್ಟ ಆ ಅಡಿಗಳು— ನೋಡುತ್ತಾನೆ. ಆವರೆ ಏನು? ನೀರಿನಲ್ಲಿ ಹೋಯ್ತು. ನಾಡಿಗಳೇ ತಟಸ್ಥವಾಗಿವೆ.

"ಹೀಗೆ ಒತ್ತಿ ಹಣ್ಣು ಮಾಡಿದರೆ, ಎಲ್ಲಿಯಾದರೂ ಪ್ರೇಮ ಹುಟ್ಟೀತೆ?" ಎಂದು ತನ್ನಷ್ಟಕ್ಕೆ ಅವನು ಒಂದು ನಿಲುಕಿಗೆ ಬಂದ. ಆದರೂ ಮತ್ತೊಮ್ಮೆ

"ನನಗೆ ಈ ಪ್ರೇಮದ ಅರ್ಥ ತಿಳಿಯುವದೆಂತು? ಅಥವಾ ತಿಳಿಯುವದೋ ಇಲ್ಲವೋ? ಇವಳಕಿಂತಲೂ ಹೆಚ್ಚು ಸುಂದರಿಯಾದ ಹುಡುಗಿಯನ್ನು ನಾನು ಕಾಣುವದು ಸಾಧ್ಯವಿಲ್ಲ; ಅಂದಮೇಲೆ ನಾನು ಈ ಮೂವತ್ತಕ್ಕೆ ಮುದುಕನಾದಂತೆಯೋ—"

ವ್ಹೇರಾ ಚಟ ಚಟ ಹೆಜ್ಜೆ ಹಾಕುತ್ತಿದ್ದಳು. ಅವಳಿಗೆ ಈಗ ಯಾವುದೂ ಬೇಕಿಲ್ಲ. ತಾನು ತನ್ನ ದುಃಖ. ಮೋರೆ ಮೇಲಕ್ಕೆತ್ತಲಿಲ್ಲ. "ಇದೇನು ಈಗಾಗಲೆ ಇವಳು ಎಷ್ಟು ಸೊರಗಿದಳು?" ಆಗ್ನೇವ್ಹನಿಗೆನಿಸಿತು.—

'ಏನೀ ಅನರ್ಥ ಇವಳ ಮನಸ್ಸಿನ ಹೊಯಿದಾಟ ನನಗೆ ತಿಳಿಯುತ್ತವೆ; ಆತ್ಮಹತ್ಯೆಯ ವಿಚಾರವೇ ಇವಳ ತಲೆಯಲ್ಲಿ ಈಗ ಬರುತ್ತಿರಬೇಕು; ತಾನೆಂಥ ನಿರ್ಭಾಗ್ಯ!'

ಬಾಗಿಲ ಹತ್ತಿರ ಹೊರಳುವಾಗ ವ್ಹೇರಾ ಇವನ ಮೇಲೆ ಒಂದು ಕಟಾಕ್ಷದ ಆಘಾತ ಮಾಡಿದಳು. ಹಿಟ್ಟಿನ್ನದೆ ಶಾಲು ಮೈತುಂಬ ಸುತ್ತಿಕೊಂಡು ವಾಟಿಕೆಯನ್ನು ದಾಟಿ ಅವಸರದಿಂದ ಮನೆ ಹೊಕ್ಕಳು.

ಒಂಟಿಯಾದ ಆಗ್ನೇವ್ಹನು ಒಮ್ಮೆ ನಿಲ್ಲುತ್ತಾನೆ; ತಿರುಗಿ ಬಾಗಿಲದ ಕಡೆಗೇ ನೋಡುತ್ತಾನೆ; ಹೀಗೆ ನೋಡುವಾಗ ಸ್ಮೃತಿಯ ಮೇಲೆ ತನ್ನದಾವುದೂ ಅಧಿಕಾರ ನಡೆಯುವದಿಲ್ಲವೆಂದು ಇವನಿಗೆ ತಿಳಿಯಲೊಲ್ಲದು. ಅಂತೂ ಜೀವ ಒದ್ದಾಡುತ್ತಿದೆ. ವ್ಹೇರಾಳ ಚಿಕ್ಕ ಅಡಿಗಳು ಮೂಡಿದ ಆ ಮೊಳ ತುಂಬಿದ ದಾರಿಯನ್ನೊಮ್ಮೆ ನೆಟ್ಟ ದೃಷ್ಟಿಯಿಂದ ನೋಡುತ್ತಾನೆ. ಇಷ್ಟೊಂದು ಅವನು ಪ್ರೀತಿಸುತ್ತಿರುವ ಹುಡುಗೆ, ತನಗಾಗಿ ಕಾದು ನಿಂತಿರುವಾಗ, ತಾನು ಒಲ್ಲೆನೆಂದು ಯಾವ ಶತಕೃತ್ಯ ಮಾಡಿದ ಹಾಗಾಯಿತು? ಸಾಮಾನ್ಯವಾಗಿ ಮಾನವನ ಬುದ್ಧಿಯ ಆಟವೆ ಇಂಥದು; ಬೇಕಾದ್ದು ಒಂದಾದರೆ, ಕೈ ಚಾಚುವದು ಮತ್ತೊಂದಕ್ಕೆ! ಈ ಮಾನವೀ ಬುದ್ಧಿಯ ದಾಸ್ಯ ಅಂತವಿಲ್ಲದ್ದು, ಅಪಾರವಾದುದು; ಸದಯನಾಗದ್ದು. ಇನ್ನೊಂದು

ಜೀವದ ದುಃಖಕ್ಕೆ ಕಾರಣನಾದನೆಲ್ಲಾ ಎನ್ನುವ ದುಃಖದ ಇರವಿನ ಝಳ ಆಗ್ನೇವ್ಗನಿಗೆ ಮಿತಿಮೀರಿ ತಗುಲಿತು.

ಒಳಗೊಳಗೇ ಇವನ ವಿವೇಕ ಇವನನ್ನು ಚುಚ್ಚುತ್ತಿತ್ತು. ಎಂಥ ಪ್ರಸಂಗವನ್ನು ಕೈಯಿಂದ ಜಾರಗೊಟ್ಟೆನಲ್ಲಾ, ಇನ್ನೆಲ್ಲಿ ಇಂಥ ಶುಭಪ್ರಸಂಗ; ಇನ್ನೆಲ್ಲಿ ನನಗೆ ಈ ಬದುಕಿನಲ್ಲಿ ಬಣ್ಣ; ಇನ್ನು ತನ್ನ ಪಾಲಿಗೆ ವ್ಹೇರಾ ಅಷ್ಟೇ ಅಲ್ಲ, ತಾರುಣ್ಯದ ಒಂದು ಭಾಗವೇ ನಷ್ಟವಾದಂತೆ! ಯಾವ ಪ್ರಣಯದ ಈ ಸುರಮ್ಯ ವೇಳೆಯನ್ನು ಈ ರೀತಿ ವ್ಯರ್ಥವಾಗಿ ಕಳೆದೆನೊ ಅಂಥ ಸಮಯ ಮುಂದೆ ಬರಲಾರದೆಂದು ಭಾವಿಸಿದ.

ಪೂಲಿನ ಹತ್ತಿರ ಬಂದ. ಈ ವರೆಗೂ ನಡೆದದ್ದನ್ನೆಲ್ಲ ಮೆಲುಕು ಹಾಕಿದ. ತಾನು ಬೆಳೆದ ಪರಿಸ್ಥಿತಿಯೇ ಅಂತಹುದು. ಜೀವನಕ್ಕಾಗಿ ಹೋರಾಟ. ತನ್ನವರೆಂಬವರ ಆಶ್ರಯವಿಲ್ಲದ ಇವನ ಬೆಳವಿಗೆ; ಸೌಂದರ್ಯಕ್ಕೂ ಇವನಿಗೂ ಮೂವತ್ತಾರರ ಅಂಕಿ; ಇವಲ್ಲೆಕ್ಕೂ ಶಿಖರವಿಟ್ಟಂತೆ ಬರಿಯ ಪುಸ್ತಕೀ ಜ್ಞಾನ! ಅಂದ ಮೇಲೆ ಇವನ ಈ ಬರಡು ಬಾಳಿಗೆ ಬೇರೆ ವ್ಯಾಖ್ಯೆ ಯಾಕೆ ಬೇಕು? ಸೌಂದರ್ಯ ಕಂಡಲ್ಲಿ ಹೃದಯ ತುಂಬಿ ಬರುವದಕ್ಕೆಲ್ಲ ಆಸ್ಪದ!

ಹಾಗೆ ದಾರಿಯನ್ನು ಸಾಗಿಸಿದ. ಗಿಡಗಳ ಝುಡುಪಿನಲ್ಲಿ ಒಂಟಿಯಾಗಿ ನಡೆಯುತ್ತಿದ್ದ; ಆಚೆಯಿಂದ ಬೆಳದಿಂಗಳ ಪಟ್ಟಿಗಳು ಗಿಡಗಳನ್ನು ತೂರಿ ಅಲ್ಲಲ್ಲಿ ದಾರಿಯಲ್ಲಿ ಬಿದ್ದಿದ್ದವು. ಇವನಿಗೋ ವಿಚಾರದ ತಂದ್ರಿ ಹತ್ತಿತ್ತು. ಕಳೆದು ಕೊಂಡದ್ದನ್ನು ಹುಡುಕುವ ಸಲುವಾಗಿ ಈ ಪ್ರಾಣಿ ಈಗ ಒದ್ದಾಡುತ್ತಿದೆ.

ಹಿಂತಿರುಗಿ ಕ್ರುಝೋನರ ಮನೆಗೆ ಮತ್ತೆ ಹೋದ. ಕಣ್ಣು ಮುಂದೆ ವ್ಹೇರಾಳ ಚಿತ್ರ ತರಲು ಸಾಹಸ ಮಾಡಿದ. ಆ ತಿಳಿಯಾದ ಬೆಳುದಿಂಗಳಲ್ಲಿ ವ್ಹೇರಾ ಮಲಗುವ ಕೊಠಡಿಯ ಕಡೆಗೆ ಆರ್ತದೃಷ್ಟಿಯಿಂದ ನೋಡಿದ. ಎಲ್ಲರೂ ನಿದ್ರೆಯಲ್ಲಿದ್ದಾರೆ; ಆದರೆ ಇವನೋ ಒಂಟಿ. ನಿಟ್ಟುಸಿರೇ ಇವನ ಸಂಗಾತಿ. ಹೀಗೆ ಎಷ್ಟೊತ್ತು ನಿಲ್ಲಲಾದೀತು? ತೋಟ ಬಿಟ್ಟು ಹೊರಬಿದ್ದ.

ಒಂದು ತಾಸು ಕಳೆದಿರಬೇಕು. ತಾನಿಳಿದ ಹಳ್ಳಿಯನ್ನು ತಲುಪಿದ. ಬಹಳ ದಣಿದಿದ್ದ. ಖಾನಾವಳಿಯ ಬಾಗಿಲಿಗೆ ಆತು ನಿಂತುಕೊಂಡ. ಬಾಗಿಲು ಬಾರಿಸಿದ. ದೂರದಿಂದ ಯಾವುದೊ ಒಂದು ನಾಯಿ ಬೊಗುಳುತ್ತಿದ್ದ ಧ್ವನಿ

ಕೇಳುತ್ತಿತ್ತು. ದೂರದಿಂದ ಚರ್ಚಿಯ ಹೊತ್ತು ತೋರಿಸುವ ಝಾಂಗಟೆಯು ಹೊಡೆತ ಕೇಳಿಸಿತು.

ಬಾಗಿಲು ತೆರೆಯುತ್ತ ಖಾನಾವಳಿಯವನು ಎಂದನು.

"ರಾತ್ರಿ ಅಪರಾತ್ರಿ ಹೀಗೆ ಅಲೆಯುವದಕ್ಕಿಂತ, ದೇವರ ಧ್ಯಾನ ಮಾಡಿದರೆ ಎಷ್ಟೊ ಒಳ್ಳೇದಾದೀತು!"

ಅಗ್ನೇಪ್ಪನು ಮಂಚದ ಮೇಲೆ ಬಿದ್ದುಕೊಂಡ. ಎಷ್ಟೋ ಹೊತ್ತಿನ ವರೆಗೂ ಏಕಾಗ್ರನಾಗಿ ದೀಪವನ್ನೇ ನೋಡುತ್ತಿದ್ದ. ಕೊನೆಗೊಮ್ಮೆ ತಲೆ ಜಾಡಿಸಿದ. ಅಸ್ತವ್ಯಸ್ತವಾದ ಸಾಮಾನುಗಳನ್ನು ಕಟ್ಟಲನುವಾದ.